


# ರಿಂಗಾರ

ಅರೆಭಾಷೆ ತ್ರೈಮಾಸಿಕ



ಸಂಪುಟ : 4 ಸಂಚಿಕೆ : 3 ದಿನಾಂಕ : 30-09-2020 ಕೊಡಗು ರೂ. 20/-

ಜುಲೈ - ಆಗಸ್ಟ್ - ಸಪ್ಟೆಂಬರ್
2020



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



ಅರೆಬಾಸೆಲಿ ಯಕ್ಷಗಾನ ತಾಳಮದ್ದಳೆ



ಅರೆಬಾಸೆಗೆ ಪಾಟ ಪುಸ್ತಕ ಮಾಡುವ ಸಭೆ



ಎನ್.ಎಸ್. ದೇವಿಪ್ರಸಾದರ ಬಗ್ಗೆ ಸಾಕ್ಷ್ಯಚಿತ್ರ ಮಾಡಿಕೆ ಸುರು ಮಾಡ್ದ್

## ಹಿಂಗಾರ ತ್ರೈಮಾಸಿಕ



ಕರ್ನಾಟಕ ಸರಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

# ಹಿಂಗಾರ

**ಅರೆಭಾಷೆ ತ್ರೈಮಾಸಿಕ**

ಸಂಪುಟ : 4 ಸಂಚಿಕೆ : 3 ದಿನಾಂಕ : 30–09–2020

ಪ್ರಧಾನ ಸಂಪಾದಕರ್
**ಲಕ್ಷ್ಮೀನಾರಾಯಣ ಕಜೆಗದ್ದೆ**

ಸಂಪಾದಕರ್
**ಡಾ. ದಯಾನಂದ ಕೂಡಕಂಡಿ**



**ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಮಡಿಕೇರಿ

| | |
|---|---|
| **HINGARA** | **ಹಿಂಗಾರ** |
| A Quarterly Magazine | ತ್ರೈಮಾಸಿಕ ಪತ್ರಿಕೆ |
| Published by | ಪ್ರಕಾಶಕರು |
| **Karnataka Arebhase Samskruthi** | **ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು** |
| **Mathu Sahitya Academy** | **ಸಾಹಿತ್ಯ ಅಕಾಡೆಮಿ** |
| Coffee Krip, 1st Floor | ಕಾಫಿ ಕೃಪಾ, ಒಂದನೇ ಮಹಡಿ, |
| Rajaseat Rd, Madikeri - 571 201 | ರಾಜಸೀಟ್ ರಸ್ತೆ, ಮಡಿಕೇರಿ–571201 |
| Ph : 08272-223055 | ದೂರವಾಣಿ : 08272–223055 |
| arebaseacademy@gmail.com | arebaseacademy@gmail.com |
| www.arebaseacademy.com | www.arebaseacademy.com |
| Chief Editor | ಪ್ರಧಾನ ಸಂಪಾದಕರ್ |
| **Lakshminarayana Kajegadhe** | **ಲಕ್ಷ್ಮಿನಾರಾಯಣ ಕಜೆಗದ್ದೆ** |
| Editor | ಸಂಪಾದಕರ್ |
| **Dr. Dayananda Kudakandi** | **ಡಾ. ದಯಾನಂದ ಕೂಡಕಂಡಿ** |
| Managing Editor | ವ್ಯವಸ್ಥಾಪಕ ಸಂಪಾದಕರ್ |
| **Chinnaswamy** | **ಚಿನ್ನಸ್ವಾಮಿ** |
| Cover Page Photo | ಮುಖಪುಟ ಚಿತ್ರ |
| **Amemane Deviprasad** | **ಅಮೆಮನೆ ದೇವಿಪ್ರಸಾದ್** |
| Printed at | ಮುದ್ರಣ |
| **Aakrithi Prints** | **ಆಕೃತಿ ಪ್ರಿಂಟ್ಸ್** |
| Mangaluru | ಮಂಗಳೂರು |
| Ph. 0824-2972002 | ದೂರವಾಣಿ : 0824–2972002 |
| Pages : 80 | ಪುಟಗಳು : 80 |
| Copis : 1500 | ಪ್ರತಿಗಳು : 1500 |
| Vol : 4 - 3 | ಸಂಪುಟ 4 ಸಂಚಿಕೆ 3 |
| Period : July to September | ಜುಲೈ – ಸಪ್ಟೆಂಬರ್ |
| Price : Rs. 20 | ಬೆಲೆ : ರೂ. 20/– |
| 3year subscription : | ತ್ರೈವಾರ್ಷಿಕ ಚಂದಾ : |
| Rs. 200 | ರೂ. 200 |



# ಅಧ್ಯಕ್ಷರ ಮಾತ್

ಎಲ್ಲವುಕೂ ನಮಸ್ಕಾರ

ಜುಲೈ, ಆಗೋಸ್ತ್. ಸೆಪ್ಟಂಬರ್ 'ಹಿಂಗಾರ' ಸಂಚಿಕೆನ ಮತ್ತೆ ನಿಮ್ಮ ಕೈಲಿ ಇಡುವ ಹೊತ್ತುಲಿ ಒಂದಷ್ಟ್ ನನ್ನ ಮಾತ್‌ಗಳ್ನ ನಿಮ್ಮೊಟ್ಟಿಗೆ ಹಂಚಿಕಣ್ತೊಳೆ. ಈ ದಿನಗ ಎಷ್ಟೊಂದು ಕಷ್ಟದ್ದಾಗಿತ್ತ್ ಅನ್ನುವಂತದ್ದ್ ನಿಮಿಗೆಲ್ಲ ಗೊತ್ತಿರುವಂತದ್ದೆ. ಕೋವಿಡ್ –19ರ ದೆಸೆಂದಾಗಿ ನಾವುಗೆ ಎತ್ತ ಹೋಕೆ ಆಗದೆ, ಏನೂ ಮಾಡಕಾಗದ ಪರಿಸ್ಥಿತಿ. ಆದರೆ ಏನೂ ಮಾಡದೆ ಸಮಯನ ಹಾಳ್ ಮಾಡಿಕೆ ನಮ್ಮ ಮೊನ್ಸ್ ಒಪ್ಪುತ್ತಿತ್ಲೆ. ದಿನಾ ಹೋಗುತ್ತುಟ್ಟು. ಇರುವ ಹಂಞ ಸಮಯಲಿ ನಮಿಗೆ ಮಾಡಿಕಿರುವ ಕೆಲ್ಸ ತುಂಬಾನೆ ಉಟ್ಟು. ಹಂಗಿರ್ಕನ ಹೊರಗೆ ಹೋಗದೆನೂ, ಜಂಬರ ತೆಗಿಯದೆನೂ ಹೆಂಗೆ ನಮ್ಮ ಬಾಸೆ ಮತ್ತೆ ಸಂಸ್ಕೃತಿನ  ವಿಸ್ತರಣೆ ಮಾಡಕ್ ಅಂತ ಗ್ಯಾನ ಮಾಡಿಕನ ನಮ್ಮ ಕಣ್ಮುಂದೆ ಎರಡ್ ವಿಸಯಗ ಬಂದೊ. ಒಂದು ಅರೆಬಾಸೆಲಿ ಮಾಡುವ ಯಕ್ಷಗಾನ ಪ್ರಸಂಗಕ್ಕೆ, ಅರೆಬಾಸೆಲಿ ಪ್ರಸಂಗಕ್ಕೆ ಪದ್ಯ ಬರಿಯೋದು ಮತ್ತೆ ಅರೆಬಾಸೆ ಪದ್ಯಗಳಿಗೆ ರಾಗ ಸಂಯೋಜನೆ ಮಾಡುವಂತದ್ದು. ಈ ವಿಚಾರ ನಮ್ಮ ತಲೆಗೆ ಬಂದ ಮೇಲೆ ತಕ್ಷಣ ನಾವು ಈ ಸಂಗತಿಲಿ ತೊಡಗಿಸಿಕೊಂಡೊ. ಅರೆ ಬಾಸೆಲಿ ಯಕ್ಷಗಾನ ಈ ಹಿಂದೆ ನಡೀತಿತ್ತ್. ಬಾಗವತಿಕೆ ಮಾತ್ರ ಕನ್ನಡಲಿ ಇರ್ತಿತ್ತ್. ಈ ಸಲ ಅರೆ ಬಾಸೆಲಿ ಭಾಗವತಿಕೆ ಹೊಸ ಪ್ರಯತ್ನ. ಈಗಾಗಲೇ ಯಕ್ಷಗಾನ ಭಾಗವತಿಕೆಲಿ ಆಗಾಗ್ಗೆ ಕೇಳಿ ಬರುವ ಮುಖ್ಯ ಹೆಸ್ರ್ ಗಳ್ಲಿ ಯುವ ಪ್ರತಿಭೆ ಭವ್ಯಶ್ರೀ ಕುಲ್ಕುಂದ ಅವು ಕೂಡ ಒಬ್ಬ. ಅವು ನಮ್ಮ ಪರಿಸರದವೇ ಆದ ಕಾರಣ ಅವರ್ನ ಕೇಳಿಕಂಡಾಕನ ಕುಸಿಲಿ ಅರೆಬಾಸೀಲಿ  ಪದ್ಯ ಬರಿಯಕೆ ಒಪ್ಪಿಕಂಡೊ. ಇದ್ ಸೊಲ್ಪ ಶ್ರಮದ ಕೆಲ್ಸ ಆದರೂ ಕನ್ನಡನ ಅರೆಬಾಸೆಯ ಜಾಯಮಾನಕ್ಕೆ ಒಗ್ಗಿಸುವಲ್ಲಿ ತುಂಬಾ ಪ್ರಯತ್ನ ಪಟ್ಟು ಅದರ್ಲಿ ಗೆಲು ಕಂಡೊಳೊ. ಅವು ಬರ್ದ ಪದ್ಯಗಳ್ನ ಕರಡು ತಿದ್ದಿ, ಮೂಲದಾಟಿಗೆ ಲೋಪ ಬರದಂಗೆ ತರುವಲ್ಲಿ ಸಹಕಾರ

ನೀಡ್ದವು ಮಡಿಕೇರಿ ಆಕಾಶವಾಣಿಯ ಹಿರಿಯ ಕಾರ್ಯಕ್ರಮ ನಿರ್ವಾಹಕರಾದ ಶ್ರೀಯುತ ಸುಬ್ರಾಯ ಸಂಪಾಜೆಯವು. ಅವರೊಟ್ಟಿಗೆ ಸೂಕ್ತ ಸಲಹೆ ಸೂಚನೆ ಕೊಟ್ಟು ಒಟ್ಟಿಗೆ ನಿಂತವು ನಾಡ್ನ ಪ್ರಸಿದ್ಧ ಅರ್ಥಧಾರಿ ಜಬ್ಬರ್ ಸಮೋ ಅವು. ಇವರೆಲ್ಲರ ಒಂದು ಪ್ರಯತ್ನಲಿ ಅರೆಬಾಸೆ ಭಾಗವತಿಕೆಗೊಂದು ರೂಪ ಬಾತ್.

ಇನ್ನ್ ಅರೆಬಾಸೆ ಪದ್ಯಗಳಿಗೆ ರಾಗ ಸಂಯೋಜನೆ ಮಾಡುವಂತದ್ದ್. ಈ ಹಿಂದೆ ಮಡಿಕೇರಿ ಆಕಾಶವಾಣಿಲಿ ಪ್ರಾದೇಶಿಕ ಬಾಸೆಯ ಪದ್ಯಗಳ್ಲಿ ಅರೆಬಾಸೆ ಪದ್ಯಗಳಿಗೆ ಕೂಡ ರಾಗ ಸಂಯೋಜನೆ ಮಾಡಿ ಅದ್ ಜನರ ಮನ್ಸ್ನ ಮುಟ್ಟಿತ್ತ್. ಹಂಗೆ ನಾವೂನೂ ಒಂದಷ್ಟ್ ಕವಿಗಳ್‌ಂದ ಅರೆಬಾಸೆ ಪದ್ಯಗಳ್ನ ಕೇಳಿ ಅದಿಕ್ಕೆ ರಾಗ ಸಂಯೋಜನೆ ಮಾಡಿ ಹಾಡ್ ಗಾರರಿಗೆ ಹುಡುಕಾಟ ನಡ್ಸಾಕನ ನಮಿಗೆ ಪಕ್ಕನೆ ನೆಂಪಿಗೆ ಬಂದ ಹೆಸರು ಕೆ.ಆರ್. ಗೋಪಾಲಕೃಷ್ಣ. ಶ್ರೀಯುತರ್ ಈಗಾಗಲೇ ಸಂಗೀತ ಕ್ಷೇತ್ರಲಿ ದೊಡ್ಡ ಹೆಸ್ರ್ ಮಾಡ್ದವು. ನಮ್ಮ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟು ರಾಗ ಸಂಯೋಜನೆ ಮಾಡಿಕೆ ಒಪ್ಪಿಕಂಡೊ. ಆದರೆ ಅರೆಬಾಸೆಲಿ ಅವಿಕೆ ಕೂಡ ಹೊಸ ಪ್ರಯತ್ನ. ಈಗ ಅಷ್ಟೂ ಪದ್ಯಗಳಿಗೆ ಭಾರೀ ಲಾಯ್ಕಲಿ ರಾಗ ಕಟ್ಟಿ ಪದ ಹಾಡಿಯೊಳೊ. ಇನ್ನೇನ್ ಹಂಞ ದಿನಲಿ ನಿಮ್ಮೆಲರ್ನ ತಲ್ಪಿದೆ.

ಇನ್ನ್ ಮುಖ್ಯವಾಗಿ ನಾನಿಲ್ಲಿ ನಿಮ್ಮ ಮುಂದೆ ಹೇಳುವಂತದ್ದ್ ಏನ್ ತೇಳಿರೆ, ಈ ಯಕ್ಷಗಾನದ ಭಾಗವತಿಕೆಯ ಹಿಂದೆ ಕೆಲ್ಸ ಮಾಡ್ದಂತಹ ಜಬ್ಬಾರ್ ಸಮೋ, ಸುಬ್ರಾಯ ಸಂಪಾಜೆ ಹಂಗೆ ಪದ್ಯಕ್ಕೆ ರಾಗ ಕಟ್ಟಿ ಹಾಡ್ ದಂತಹ ಕೆ. ಆರ್. ಜಿ, ಇವೆಲ್ಲವೂ ಅರೆಬಾಸೆಯ ಪರಿಸರದಲ್ಲಿ ಇರ್ವ, ಆದರೆ ಅರೆಬಾಸೆ ಮಾತೃ ಬಾಸೆ ಅಲ್ಲದವು. ನಿಜಕ್ಕೂ ಅವರ ಶ್ರಮ ತುಂಬಾ ದೊಡ್ಡದ್. ಅವು ಕೊಟ್ಟ ಕೊಡುಗೆಗೆ ನಾವು ಋಣಿಗ. ಅವುಕೆ ನಮ್ಮ ಅಭಿನಂದನೆಗ ಸಲ್ಲಿದೆ. ಒಂದು ಬಾಸೆ, ಸಂಸ್ಕೃತಿ, ಜಾತಿ, ಸಮುದಾಯದ ಗಡಿ ದಾಟಿ ಹೋದುತೇಳುದು ಹಿಂಗೆ. ನಮ್ಮ ಅಕಾಡೆಮಿಯ ಉದ್ದೇಸ ಕೂಡ ಇದುವೇ. ನಮ್ಮ ಬಾಸೆ ಸಂಸ್ಕೃತಿ ಉಳಿಯೋಕು ತೇಳಿರೆ ಅದನ್ನ ಎಲ್ಲಾ ಬಾಸಿಗರ್, ಎಲ್ಲಾ ಸಮುದಾಯದವು ಕೂಡ ಒಪ್ಪಿಕಣೋಕು, ಕಲೆ, ಸಾಹಿತ್ಯದ ಮೂಲಕ ಬಾಸೆ ಗಡಿ ದಾಟಕು. ಹಂಗಾದಾಗ ಬಾಸೆಯೊಟ್ಟಿಗೆ ಇರುವ ಕಲೆ, ಸಾಹಿತ್ಯ, ಸಂಸ್ಕೃತಿ ಎಲ್ಲವೂ ಉಳ್ದದೆ. ನಮ್ಮಿಂದಾದ ಮಟ್ಟಿಗೆ ನಾವು ಈ ಕೆಲಸ ನಾವು ಮಾಡುತ್ತೊಳೊಂತೇಳುವಂತ ಕುಸಿ ನಮಿಗುಟ್ಟು. ನೀವೂ ಕೂಡ ಇದಿಕ್ಕೆ ಬೆಂಬಲ ಕೊಟ್ಟರೆ ಅಂತ ನಾವು ನಂಬುವೆ. ಮತ್ತೆ ಯಾಗೋಳ್ನಾಂಗೆ ಹಿಂಗಾರ ಓದಿ, ಬರಿಯನಿ. ನಿಮ್ಮ ಅಭಿಪ್ರಾಯ ಕೂಡ ನಮಿಗೆ ಅಷ್ಟೇ ಮುಖ್ಯ.

**ಲಕ್ಷ್ಮೀನಾರಾಯಣ ಕಜೆಗದ್ದೆ**



# ಸಂಪಾದಕರ ಮಾತ್

ಅರೆಬಾಸೆನ ಹಿಂಗಾರ ತ್ರೈಮಾಸಿಕ ಪುಸ್ತಕ ಓದ್‌ವ ಪ್ರೀತಿಯ ಎಲ್ಲ ಓದ್‌ಗರಿಗೆ ನಮಸ್ಕಾರಗ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಂದ ಹೊರಬರ್ತಿರ್ವ ಹಿಂಗಾರ ತ್ರೈಮಾಸಿಕನ ಚಂದಾದಾರ್‍ರಾಗಿ, ನಿರಂತರಾಗಿ ಓದಿಕಂಡ್ ಮೌಲ್ಯದ ಬರಹಗಳ್ನ ಕೊಟ್ಟ್ ಸಹಕರಿಸ್ತಿರುವ ನಿಮಿಗೆ ನಮಸ್ಕರಿಸಿನೆ.

ಈ ಹಿಂಗಾರ ತ್ರೈಮಾಸಿಕ ಪುಸ್ತಕ ನಾಲ್ಕನೆ ಸುಂಪುಟದ ಮೂರ್‍ನೆ ಸಂಚಿಕೆ. ಈ ಸಂಚಿಕೆಲಿ ಜುಲೈಂದ ಸೆಪ್ಟಂಬರ್ ತಿಂಗಳ್ನವರೆಗಿನ ಸಂಗತಿಗಳ್ನ ಸಂಕಲಿಸ್ಯೊಳೊ. ಈ ಸಂಚಿಕೆ ಸೆಪ್ಟಂಬರ್ ತಿಂಗಳ್‌ಲಿ ಪ್ರಕಟ ಆಕಾಗಿತ್. ಆದ್ರೆ ಕೆಲವೊಂದ್ ಕಾರಣಂದ ಸಂಚಿಕೆನ ಸರಿಯಾದ ಸಮಯಕ್ಕೆ ಹೊರತಾಕೆ ಆತ್ಲೆ. ಅದಕ್ಕಾಗಿ ಚಂದಾದರರ್, ಓದ್‌ಗರ್ ಮತ್ತೆ ಬರಹಗಾರರ್ಲಿ ಕ್ಷಮೆ ಕೇಳ್ತೊಳೆ. ಇನ್ನ್ ಸರಿಯಾದ ಸಮಯಲಿ ತ್ರೈಮಾಸಿಕನ ಪ್ರಕಟಿಸಿ ನಿಮ್ಮ ಕೈಗೆ ಸಿಗುವಂಗೆ ಪ್ರಯತ್ನ ಪಟ್ಟವೆಂತ ಭರವಸೆ ಕೊಟ್ಟನೆ.

ಈ ಸಂಚಿಕೆಲಿ ಚೈತನ್ಯ ಸೇವಾಶ್ರಮದ ಶ್ರೀ ಶ್ರೀ ಸ್ವಾಮಿ ಯೋಗೇಶ್ವರನಂದ ಸರಸ್ವತಿಯವರ ಪರಿಚಯನ ಮಾಡ್ಯೊಳೊ. ಇತ್ತೀಚೆಗೆ ನಮ್ಮೆಲ್ಲರ್‍ನ ಅಗಲಿದ ರಂಗಭೂಮಿಲಿ, ಶಿಕ್ಷಣ ಕ್ಷೇತ್ರಲಿ ಮತ್ತೆ ಕಲಾವಿದರಾಗಿ ಗುರ್ತಿಸಿಕಂಡಿದ್ದ ನಮ್ಮ ಅಕಾಡೆಮಿನ ಎರಡನೆ ಅವದಿನ ಸದಸ್ಯರಾಗಿದ್ದ ಮೋಹನ ಸೋನರವರ್‍ನ ನೆನಪಿಸಿಕೊಂಡೊಳೊ. ಚಿಂತನೆ ವಿಭಾಗಲಿ ಗಾಂಧೀದರ್ಶನನ ಕೂಡ ಮಾಡ್ಯೊಳೊ. ಕೊಡಗ್ ಮತ್ತೆ ದಕ್ಷಿಣ ಕನ್ನಡ ಜಿಲ್ಲೆಯವುಕ್ಕೆ ಆಟಿ ತಿಂಗ ಬಹಳ ಮುಖ್ಯ. ಅದಕ್ಕಾಗಿ ಆಟಿ ತಿಂಗದ ಮಹಿಮೆನ ವಿವರವಾಗಿ ಪ್ರಕಟಿಸ್ಯೊಳೊ. ನಮ್ಮ ಜನಾಂದ ಮದುವೆಲಿ ವರ ವಧುಗೆ ತಾಳಿಕಟ್ಟಿ ಆದ ಮೇಲೆ ಗಂಡನ ಮನೆಗೆ ಕರ್ಕಂಡ್ ಹೋಕನ ಹೆಣ್ಣ್‌ನ ಕಡೆವು ಗಂಡ್‌ನ ಕಡೆವುಕೆ ಹೆಣ್ಣ್‌ನ ವಯ್ಸಿ ಕೊಡುವ ಪದಿಷ್ಟನ ಕೂಡ ಬಾರಿ ಲಾಯ್ಕಲಿ ಇಲ್ಲಿ ವಿವರ್ಸಿಯ್ಯೊಳೊ.

ಅನುಭವ ವಿಭಾಗಲಿ ಅಂದ್-ಇಂದ್‌ಂತೆಳುವ ಲೇಖನ ಮತ್ತೆ ದೆಹಲಿಲಿ ಜರ್‌ಗಿದ ಫಿಟ್ ಇಂಡಿಯ ಕ್ಯಾಂಪೇನ್‌ಲಿ ಭಾಗವಹಿಸಿದ ನಮ್ಮ ಜನಾಂಗದ ಹಿರಿಯರಾದ ಕಟ್ರತನ ಬೆಳ್ಯಪ್ಪರವರ ಅನುಭವನ ಹಾಗೇ ವೈಚಾರಿಕ ವಿಭಾಗಲಿ ಜಾತಿ ವ್ಯವಸ್ಥೆನ ಬಗ್ಗೆ ಕೂಡ ವಿವರಿಸ್ಯೊಳೊ. ಕತಾ ಜೊಂಪೆ ವಿಭಾಗಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ವತಿಂದ ನಡ್ಸಿದ ಅರೆಭಾಷೆ ಕತೆ ಸ್ಪರ್ಧೆಲಿ ಸುರುನ ಮೂರು ಬಹುಮಾನ ಪಡ್ಕಂಡ ಕತೆಗಳನ್ನ ಮತ್ತೆ ಕವನ ವಿಭಾಗ ಅರೆಭಾಷೆ ಕವನ ಸ್ಫರ್ಧೆಲಿ ಸುರುನ ಮೂರು ಬಹುಮಾನ ಪಡ್ಕಂಡ ಕವನಗಳ್ನ ಜೊತೆಲಿ ಸೂರ್ಯಂತೇಳುವ ಕವನನ ಪ್ರಕಟಿಸ್ಯೊಳೊ. ಬನ್ನಿ ಓದೋಮಂತೇಳುವ ಅಂಕಣಲಿ ಪ್ರಸಿದ್ಧ ಕವಿ, ಅಂಕಣಕಾರ, ಕತೆಗಾರ ಜಯಂತ ಕಾಯ್ಕಿಣಿಯವರ ಅಂಕಣ ಬರಹ ಬೊಗಸೆಯಲ್ಲಿ ಮಳೆಯ ಒಂದು ಕಂಡಿಕೆನ ಪ್ರಕಟಿಸ್ಯೊಳೊ. ಮುಖ ಪುಟ ಚಿತ್ರ ಕೂಸುನ ತೊಟಿಗಿಲ್‌ನ ಮಾಹಿತಿನ ಈ ಸಂಚಿಕೆಲಿ ಕೊಟ್ಟೊಳೊ.

ಈ ಸಂಚಿಕೆಲಿ ಪ್ರಕಟ ಆದ ಬರವಣೆಗೆಗೆ ಚಿತ್ರಕಲಾವಿದ ಪ್ರಸನ್ನ ಐವರ್ನಾಡು ಇವು ಗೆರೆಗಳ ಮೂಲಕ ಜೀವ ತುಂಬ್ಯೊಳೊ. ಸಂಚಿಕೆನ ಹೊರತಾಕೆ ಅಕಾಡೆಮಿನ ಅಧ್ಯಕ್ಷರ್, ಸಹ ಸಂಪಾದಕರ್, ಸರ್ವ ಸದಸ್ಯರ್ ಮತ್ತೆ ರಿಜಿಸ್ಟ್ರಾರ್ ಸಹಕರಿಸ್ಯೊಳೊ. ಬರಹಗಾರರ್ ತಮ್ಮ ಅಮೂಲ್ಯವಾದ ಬರವಣೆಗೆಗಳನ್ನ ನೀಡಿ ಸಂಚಿಕೆನ ಮೆರ್‌ಗ್‌ನ ಜಾಸ್ತಿ ಮಾಡ್ಯೊಳೊ. ಪ್ರತಿ ತಿದ್ದುವಲ್ಲಿ ಸಂಪಾದಕ ಮಂಡಳಿನ ಸದಸ್ಯರಾದ ಬೈತಡ್ಕ ಜಾನಕಿ ಬೆಳ್ಯಪ್ಪ ಮತ್ತೆ ಎಲ್ಲ ಸದಸ್ಯರ್‌ಗ ಕೈ ಜೋಡಿಸ್ಯೊಳೊ. ಅಮೆಮನೆ ದೇವಿಪ್ರಸಾದ್‌ವು ಮುಖಪುಟದ ಪೋಟೊ ನಿಡ್ಯೊಳೊ. ಆಕೃತಿ ಪ್ರಿಂಟ್ಸ್, ಮಂಗಳೂರು ಇವು ಲಾಯ್ಕಲಿ ಮುದ್ರಿಸಿ ಸಹಕರಿಸ್ಯೊಳೊ. ಸಂಚಿಕೆನ ಪ್ರಕಟಿಸಿಕೆ ಸಹಕರ್‌ಸಿದ ಎಲ್ಲವ್ಕೆ ಹೃದಯ ತುಂಬಿದ ಧನ್ಯವಾದಗಳ್‌ನ ಅರ್ಪಿಸಿನೆ.

ದಿನಾಂಕ: 30.09.2020

**ಡಾ. ದಯಾನಂದ ಕೂಡಕಂಡಿ**
ಸಂಪಾದಕರ್

ಪ್ರಕಟ ಆದ ಬರವಣೆಗೆಗೆ ಆಯಾ ಬರಹಗಾರರೆ ಜವಾಬ್ದಾರರ್

# ಹಿಂಗಾರ ಒಡ್ಸ್‌ಕನ

**ವೈಚಾರಿಕ**



**ಕತಾ ಜೊಂಪೆ**



**ಬನ್ನಿ ಓದೋಮ**



**ಕವನ**



**ಸಂದರ್ಶನ**



**ಮುಖಪುಟ ಚಿತ್ರದ ಪರಿಚಯ**




## ಚೈತನ್ಯ ಸೇವಾಶ್ರಮದ ಶ್ರೀ ಶ್ರೀ ಸ್ವಾಮೀ ಯೋಗೇಶ್ವರಾನಂದ ಸರಸ್ವತಿ

●

**ಯೋಗೀಶ ಹೊಸೊಳಿಕೆ**

ಗಂಭೀರ ವ್ಯಕ್ತಿತ್ವ, ಧಾರ್ಮಿಕ ಶ್ರದ್ಧೆ, ಸಮಾಜಪರ ಚಿಂತನೆ, ಸಾಮಾನ್ಯರೊಟ್ಟಿಗೆ ಸಮಾನರಾಗಿ ಬೆರೆವ ಸದ್ದಿಲ್ಲದ ಸಾಧಕ ಸುಳ್ಯ ತಾಲೂಕು ಅಜ್ಜಾವರದ ಚೈತನ್ಯ ಸೇವಾ ಆಶ್ರಮದ ಶ್ರೀ ಶ್ರೀ ಯೋಗೇಶ್ವರಾನಂದ ಸರಸ್ವತಿ ಸ್ವಾಮಿ.

1941ರ ದಶಂಬರ್ 20ರಂದ್ ಅಡ್ಪಂಗಾಯದ ಬಾಲಣ್ಣ ಮತ್ತೆ ದೇವಮ್ಮ ಇವರ ಎಂಟ್ ಮಕ್ಕಳ್ಲಿ ಐದನೇ ಮಂಜನಾಗಿ ಹುಟ್ಟಿದೊ. ಇವರ ಬಾಲ್ಯದ ಹೆಸರು ಶ್ರೀಕಾಂತ್. ಅಜ್ಜಾವರ ಸ.ಹಿ.ಪ್ರಾ. ಶಾಲೆಲಿ ಪ್ರಾಥಮಿಕ ಪಾಠ ಕಲ್ತ್, ಸುಳ್ಯದ ಸರಕಾರಿ ಪ್ರೌಢಶಾಲೆಲಿ 10ನೇ ತರಗತಿ ಮುಗ್ಸಿ ಮಂಗಳೂರು ಸರಕಾರಿ ಬುನಾದಿ ಶಿಕ್ಷಕರ ತರಬೇತು ಶಾಲೆಲಿ ತರಬೇತಿ ಮುಗ್ಸಿದಂಗೆ ಐನೆಕಿದು ಶಾಲೆ ಮುಖ್ಯಗುರುಗಳಾಗಿ ನೇಮಕಗೊಂಡೊ.



3 ವರ್ಷ ಮಕ್ಕಳ್‌ಗೆ ಪಾಠ ಹೇಳ್ದ ಇವು ಪುತ್ತೂರು ಫಿಲೋಮಿನ ಕಾಲೇಜ್‌ಲಿ

ಪಿ.ಯು.ಸಿ. ಮುಗ್ಸಿ ಮಂಗಳೂರು ಅಶೋಕನಗರದ ಹಿ.ಪ್ರಾ. ಶಾಲೆಲಿ ಅಧ್ಯಾಪಕರಾಗಿ 8 ವರ್ಷ ಸೇವೆ ಸಲ್ಲಿಸಿದೊ. ಈ ನಡುಲಿ ಸೈಂಟ್ ಅಲೋಷಿಯಸ್ ಸಂಧ್ಯಾ ಕಾಲೇಜಿಲಿ ಡಿಗ್ರಿ ಮುಗ್ಸಿ ಕರ್ನಾಟಕ ವಿಶ್ವವಿದ್ಯಾಲಯಲಿ ಎಂ.ಎ. ಮಾಡಿದೊ. ಮತ್ತೆ ಬೊಂಬ್ಯಾಯ ಶ್ರೀ ಶ್ರೀ ಸ್ವಾಮಿ ಚಿನ್ಮಯಾನಂದರವರ ಸಾಂದೀಪನಿ ಸಾಧನಾ ಕೇಂದ್ರದಲ್ಲಿ 3 ವರ್ಷ ಭಗವದ್ಗೀತೆ ಉಪನಿಷತ್ತುಗಳಲ್ಲಿ ಅಧ್ಯಯನ ಮಾಡಿ, ಲೋನವಾಲ ಮತ್ತೆ ಗುಜರಾತಿನ ರಾಜಕೋಟೆಲಿ ಯೋಗ ಡಿಪ್ಲೋಮ ಮಾಡಿದೊ.

ರೈತ ಕುಟುಂಬಲಿ ಹುಟ್ಟಿದ ಇವ್ಕೆ ಆಧ್ಯಾತ್ಮಿಕ ವಿದ್ಯೆಲಿ ಆಸೆ. ಜಾತಿ ಪರಂಪರೆಂದ ಬೇರೆ ಬೇರೆ ಮಠಗಳ್ಲಿ ಅವಕಾಶ ಇಲ್ಲದಾಕನ ಕೆಲ್ಸ ಬುಟ್ಟು ಹೊರಟದ್ 1972ರ ಸ್ವಾತಂತ್ರ್ಯ ದಿನದಂದ್ ಬೊಂಬಾಯಿ ಚಿನ್ಮಯಿ ಮಿಶನ್ನಿನ ಸಾಂದೀಪನಿ ಸಾಧನಾ ಕೇಂದ್ರಕ್ಕೆ. ಅಲ್ಲಿ ಭಗವದ್ಗೀತೆ, ಉಪನಿಷತತ್ ಅಭ್ಯಾಸದೊಟ್ಟಿಗೆ ಜಪ, ಧ್ಯಾನ ಕಲ್ತ್ ಶ್ರೀ ಪಂಡಿತ್ ದಿಗಂಬರ ಶಾಸ್ತ್ರಿ ಅವರ್‌ಂದ ವೇದ ಪಾರಾಯಣ ಕಲ್ತ್. ಶ್ರೀ ಸ್ವಾಮೀಜಿಗಳ್‌ಂದ ಶ್ರೀ ಚೈತನ್ಯ ಸ್ವಾಮಿ ದೀಕ್ಷೆ ಪಡ್ದೊ. ಶ್ರೀ ರಾಮಚಂದ್ರ ಐತಾಳರ ಕೈಲ ಜ್ಯೋತಿಷಶಾಸ್ತ್ರ ಕಲ್ತ್ ಮಂತ್ರ ದೀಕ್ಷೆ ಪಡ್ದೊ.

ಮಂಗಳೂರು ಪೇಟೆನ ಸರಕಾರಿ ಪ್ರಾಥಮಿಕ, ಹೈಸ್ಕೂಲ್, ಕಾಲೇಜು ಮಕ್ಕಳ್ಗೆ ಭಗವದ್ಗೀತೆನ ಆಧಾರಲಿ ನೀತಿ ಪಾಠಗಳ ಬೋದಿಸಿದ್ ಮಾತ್ರ ಅಲ್ಲದೆ ಗೀತಾ ಪ್ರಚಾರ ಸಮಿತಿ ಸುರು ಮಾಡಿ ಇದರ ಬೇರೆ ಬೇರೆ ಅಧ್ಯಾಯಗಳ 24 ಸಾವಿರ ಪ್ರತಿಗಳ ಪುಕ್ಕಟೆಯಾಗಿ ಹಂಚಿದೊ. 4 ವರ್ಷದ ಈ ಕೆಲ್ಸಲಿ 22 ಸಾವಿರ ಮಕ್ಕ ಭಾಗವಹಿಸಿದ್ದೊ. ಯೋಗ ಶಿಕ್ಷಣ ಸಮಿತಿ ಸುರುಮಾಡಿ 50 ಸಾವಿರಕ್ಕೂ ಹೆಚ್ಚಿನ ಮಕ್ಕಳ್ಗೆ 15 ದಿನಗಳ ಯೋಗ ತರಬೇತಿ ಕೊಟ್ಟದರ ಮರೆಯಕಾದುಲೆ.

ಕನ್ಯಾಕುಮಾರಿಂದ ಕಾಶ್ಮೀರದ ಮುಟ್ಟ, ಗುಜರಾತ್‌ಂದ ಕಲ್ಕತ್ತಾ ಮುಟ್ಟ ಸಂಚರಿಸಿ ಲೋಕಾನುಭವನ ಪಡ್ದಳೊ. ಡಿಲ್ಲಿಯ ವಿಶ್ವ ಯುವ ಕೇಂದ್ರದಲ್ಲಿ ನಡ್ದ ಧರ್ಮ ಮತ್ತು ಅದರ ಪ್ರಗತಿಯ ಬಗ್ಗೆ 15 ದಿನಗಳ ಸೆಮಿನಾರ್‌ನಲ್ಲಿ ದ.ಕ. ಜಿಲ್ಲೆಂದ ಏಕೈಕ ಪ್ರತಿನಿಧಿಯಾಗಿ ಆಯ್ಕೆಯಾಗಿ ತರಬೇತಿ ಪಡ್ದೊ.

1997ರಲ್ಲಿ ಶ್ರೀ ಸ್ವಾಮಿ ಚಿನ್ಮಯಾನಂದರವರ ಶಿಷ್ಯೆಯಾದ ಶ್ರೀ ಶಾರದಾ ಪ್ರಿಯಾನಂದ ಅವರ ಕೈಯಿಂದ ವಿದ್ವತ್ ಸನ್ಮಾನ ಪಡ್ದ್ 'ಶ್ರೀ

ಸ್ವಾಮಿ ಯೋಗೇಶ್ವರಾನಂದ ಸರಸ್ವತಿ’ತೇಳ್ವ ಸನ್ಯಾಸತ್ವ ಸ್ವೀಕರಿಸಿದೊ.

ಕಳೆದ 20 ವರ್ಷಗಳ್‌ಂದ ಹುಟ್ಟೂರಾದ ದೇವರಕಳಿಯಲಿ ಚೈತನ್ಯ ಸೇವಾ ಟ್ರಸ್ಟ್ (ರಿ.) ಕಟ್ಟಿಕಂಡ್ ಚೈತನ್ಯ ಸೇವಾ ಆಶ್ರಮ ನಡ್ಸಿಕಂಡ್ ಬರ್ತಾ ಒಳೊ. ಇಲ್ಲಿ ಸೇರುವ ಮಕ್ಕಳಿಗೆ ಊಟ, ವಸತಿನೊಟ್ಟಿಗೆ ಗೀತಾ ಪಾರಾಯಣ, ವೇದ, ಜಪ, ಧ್ಯಾನ, ಅರ್ಚನೆ, ಆರತಿ, ಭಜನೆ ಕಲ್ಸಿ ಶಾಲೆಗೆ ಕಳುಸುವ ಕೆಲ್ಸನ ಯಾವುದೇ ಫಲಾಪೇಕ್ಷೆ ಇಲ್ಲದೆ ನಡ್ಸಿಕಂಡ್ ಬರ್ತಾ ಒಳೊ.

ಸ್ವಾಮೀಜಿ ಈವರೆಗೆ ಉಪನಿಷತ್ತುಗಳ ವ್ಯಾಖ್ಯಾನ, ಬ್ರಹ್ಮ ಸೂತ್ರದ ವ್ಯಾಖ್ಯಾನ, ಭಗವದ್ಗೀತೆ ಅಧ್ಯಾಯಗಳ ವ್ಯಾಖ್ಯಾನ, ಯೋಗಾಭ್ಯಾಸದ ಪ್ರಾಯೋಗಿಕ ಕೃತಿಗ, ಬಾಲ ಭಜನಾವಳಿಗ, ಪದ್ಯ ಸಾಹಿತ್ಯಗ, ಆಧ್ಯಾತ್ಮಿಕ ನಾಟಕಗ ಮಾತ್ರ ಅಲ್ಲದೆ ಧಾರ್ಮಿಕ, ನೈತಿಕ, ಸಾಂಸ್ಕೃತಿಕ, ಸಾಮಾಜಿಕ ಹೀಂಗೆ 172 ಕಿರು ಪುಸ್ತಕಗಳ ಬರ್ದ್ ಚೈತನ್ಯ ಸೇವಾ ಟ್ರಸ್ಟ್‌ಲಿ ಪ್ರಕಟಿಸಿ ಉಚಿತವಾಗಿ ಹಂಚಿದ ಸ್ವಾಮೀ ಗ್ರಾಮೀಣ ಪ್ರದೇಶಲ್ಲಿ ಸದ್ದಿಲ್ಲದೆ ಸಾಹಿತ್ಯ ಕ್ರಾಂತಿನೆ ಸೃಷ್ಟಿ ಮಾಡಿಯೊಳೊ.

ಸ್ವಾಮೀಜಿಯವರ 122ನೇ ಕೃತಿ ಆಚಾರ-ವಿಚಾರದ ಚಿಂತನೆನ ಪುಸ್ತಕ ‘ಸುಧಾರಣೆ’ ಇದರ ಯುವ ಸಾಹಿತಿ ಯೋಗೀಶ ಹೊಸೊಳಿಕೆ ಅರೆಬಾಸೆಗೆ ತರ್ಜಿಮೆ ಮಾಡಿಯೊಳೊ. ಇವರ ಬರವಣಿಗೆ, ಪ್ರಕಟಣೆ, ಉಚಿತ ಹಂಚುವ ಈ ಕಾಯಕ ನಿರಂತರ ನಡ್ದೆದೆತೇಂಟ್ರೆ ಸುಲಭದ ಸಂಗತಿಯಲ್ಲ. ಇದೊಂದು ಪವಾಡದ ರೀತಿಲಿ ನಡ್ದೆತ ವುಟ್ಟು.

ಆಶ್ರಮಲಿ ಜಾತಿ-ಮತಗ, ಗಂಡ್ ಹೆಣ್ಣೆಂಬ ಬೇಧ ಇಲ್ಲದೆ ಜಪ, ಧ್ಯಾನ ಮಾಡ್ತುವೆ. ಮಹಿಳೆಯರ್‌ಂದಲೂ ಗಣಹೋಮ, ಸತ್ಯನಾರಾಯಣ ಪೂಜೆ, ದುರ್ಗಾಪೂಜೆನ ಮಾಡ್ತುವೆ. ಮಾತ್ರ ಅಲ್ಲದೆ ಶಾಲೆ ಮಕ್ಕಳಿಗೆ ನಿರಂತರ ಬರೆವ ಪುಸ್ತಕ, ಚೀಲ, ಪೆನ್ನು ಹೀಂಗೆ ವಿತರಣೆ ಕಾರ್ಯ ಸದ್ದಿಲ್ಲದೆ ಮಾಡ್ತಾ ಒಳೊ.

ಸ್ವಾಮೀಜಿಗೆ ಈಗಾಗಲೇ ಹತ್ತಾರು ಸನ್ಮಾನ ಗೌರವಗ ಒದಗಿ ಬಂದಳೊ. ಮುಖ್ಯವಾಗಿ-

* 2005ಲ್ಲಿ ಕ.ಸಾ.ಪ. ಸುಳ್ಯ ಇವರ್‌ಂದ ತಾಲೂಕು ಮಟ್ಟದ ಸಾಹಿತ್ಯ ಪ್ರಶಸ್ತಿ

* 2015ರಲ್ಲಿ ರೋಟರಿ ಕ್ಲಬ್ ಸುಳ್ಯ ಇವರ್‌ಂದ ಸೇವಾ ಸಾಧನಾ

ಪ್ರಶಸ್ತಿ

* 2016ಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಮತ್ತೆ ಸುವಿಚಾರ ಸಾಹಿತ್ಯ ವೇದಿಕೆಂದ ಕನ್ನಡ ರಾಜ್ಯೋತ್ಸವ ಸಾಹಿತ್ಯ ಸಂಭ್ರಮ ಪ್ರಶಸ್ತಿ

* 2017ರಲ್ಲಿ ಕಿರಣ ರಂಗ ಅಧ್ಯಯನ ಸಂಸ್ಥೆ ಗುತ್ತಿಗಾರು ಇವರ್ಂದ ರಾಜ್ಯ ಮಟ್ಟದ 'ಕಿರಣ ಸಾಹಿತ್ಯ ಪ್ರಶಸ್ತಿ'.

* 2016ರಲ್ಲಿ ಉಜ್ವಲ ಪ್ರಜ್ವಲ ಪ್ರಕಾಶನಂದ ಸಾಹಿತ್ಯರತ್ನ ಪ್ರಶಸ್ತಿ

ಆಶ್ರಮಲಿ ಭಗವತಿ ಮಂದಿರ ಮತ್ತೆ ಶಿರಡಿ ಶ್ರೀ ಸಾಯಿಬಾಬಾರವರ ಮೂರ್ತಿ ಸ್ಥಾಪಿಸಿ ನಿತ್ಯ ಪೂಜೆ ಪುರಸ್ಕಾರಗ ನಡ್ದವೆ.

80ರ ಇಳಿಪ್ರಾಯಲೂ ಇವರ ಅಧ್ಯಯನ, ಪರಿಶ್ರಮ ಸಮಾಜದ ಚಿಂತನೆ ಹೊಸ ಜನಾಂಗಕ್ಕೆ ಹೊಸ ಹೊಂಗಿರಣದಂಗೆ ಕಂಡವೆ.

---

**ಯೋಗೀಶ ಹೊಸೊಳಿಕೆ**
ಕಿರಣ ರಂಗ ಅಧ್ಯಯನ ಸಂಸ್ಥೆ, ಗುತ್ತಿಗಾರು – 574 218
ಮೊಬೈಲ್ : 9449576632




# ಮೋಹನ ಸೋನ ನುಡಿನಮನ



ಡಾ. ವಿಶ್ವನಾಥ ಬದಿಕಾನ

ರಂಗಭೂಮಿ, ಶಿಕ್ಷಣ ಮತ್ತೆ ಕಲಾವಿದ ಮೋಹನ ಸೋನ ದಕ್ಷಿಣ ಕನ್ನಡ ಜಿಲ್ಲೆನ ಸುಳ್ಯ ತಾಲೂಕ್‌ನ ಸೋನಂಗೇರಿ ನಡುಮನೆಯವು.

ತಂದೆ ವೆಂಕಟ್ರಮಣ ಗೌಡ ತಾಯಿ ಚಿನ್ನಮ್ಮ ದಂಪತಿಯವ್ಕೆ ಜನವರಿ 29, 1954ರ್‌ಲಿ ಮೋಹನ ಸೋನ ಜನಿಸಿದೊ. ಇವರ ಅಣ್ಣ ಚಂದ್ರಶೇಖರ (ಅರಣ್ಯ ಇಲಾಕೆಲಿ ಕೆಲ್ಸ) ತಮ್ಮ ಗೋಪಾಲ (ರಬ್ಬರ್ ಇಲಾಕೆಲಿ ಕೆಲ್ಸ). ಇವರ ಹೆಣ್ಣ್ ಮಾದವಿ. ಇಬ್ಬರ್ ಮಕ್ಕ. ಮಗಳ್ ಡಾ. ಮೃಣಾಲಿನಿ ಎಂ.ಎಸ್ಸಿ.,ಎಂ,ಟೆಕ್., ಮಂಜ ಗಗನ್ ಬಿ.ಇ., ಎಂ.ಟೆಕ್. ಓದಿ ಕೆವಿಜಿ ಎಂಜಿನಿಯರಿಂಗ್ ಶಿಕ್ಷಣ ಸಂಸ್ಥೆಲಿ ಸಿವಿಲ್ ಪ್ರಾಧ್ಯಾಪಕರಾಗೊಳೊ.

ಸೋನ ಸುಳ್ಯದ ಬೋರ್ಡ್ ಹೈಸ್ಕೂಲ್‌ಲಿ ಎಸ್.ಎಸ್.ಎಲ್.ಸಿ., ಪಿಯುಸಿ, ಮಂಗಳೂರ್ ಸರಕಾರಿ ಸ್ಕೂಲ್‌ಲಿ ಟಿಸಿಎಚ್ ಮತ್ತೆ ಮೈಸೂರ್‌ಲಿ ಆರ್ಟ್ ಡಿಪ್ಲೋಮಾ ಓದಿದೊ. ಮುಂದೆ ಮಂಗಳೂರ್‌ನ ಬದ್ರಿಯಾ ಹೈಸ್ಕೂಲ್‌ಲಿ ಡ್ರಾಯಿಂಗ್ ಮಾಸ್ಟ್ರ, ಸುಳ್ಯ ತಾಲೂಕ್‌ನ ದೊಡ್ಡತೋಟಲಿ ಪ್ರಾತಮಿಕ ಸಾಲೆಯೊಂದರ‍್ಲಿ ಡ್ರಾಯಿಂಗ್ ಮಾಸ್ಟ್ರ ಆಗಿ ಕೆಲ್ಸ ಮಾಡಿದ್ದೊ. ಮುಂದೆ 1983ರ‍್ಲಿ ಬಂಟ್ವಾಳ ತಾಲೂಕ್‌ನ ವಿಟ್ಲದ CPCRI ಸಂಸ್ತೆಲಿ Artist cum Photographar ಆಗಿ ಸೇರಿ, 2014ಕ್ಕೆ ಸೇವೆಂದ ನಿವ್ರತ್ತರಾದೊ. ಪಿತ್ತಕೋಶದ ಸಮಸ್ಯೆಲಿ 66ನೇ ವಯಸ್ಸ್‌ನ ಮೋಹನ ಸೋನಾ ಅವು ಅಕ್ಟೋವರ್ 12, 2020ರಂದ್ ಸೋಮಾರ ರಾತ್ರಿ ತೀರಿಹೋದೊ.

'ಬಣ್ಣಗ ಮತ್ತೆ ಮಕ್ಕಳ ಮನಸ್ಸ್' ಬಗ್ಗೆ ಹಲವಾರ್ ರಂಗಪ್ರಯೋಗನ ದಕ್ಷಿಣ ಕನ್ನಡ ಜಿಲ್ಲೆಲಿ ಸೋನ ಸಂಗಟಿಸಿಯೊಳೊ. ವಿಟ್ಲದ CPCRI ವಾರ್ಷಿಕೋತ್ಸವಲಿ ಕ್ಯಾಂಪಸ್‌ನ ಮಕ್ಕಳ್ಗೆ ಮಾಡ್ಸಿದ ನಾಟಕಗ, ವಿಟ್ಲ ಪೇಟೆನ ಹೆಬ್ಬಾರರ ಮನೆಯಂಗಳಲಿ ನಡ್ದ ಮಕ್ಕಳ ನಾಟಕ ಜನಮಾನಸಲಿ ಇಂದ್‌ಗೂ ನೆಂಪು ಮಾಡ್ದೆ. ಸೋಣಂಗೇರಿನ 40 ಮೂಲ ಮನೆಗಳ ಚಿತ್ರಗ್ಯಾಲರಿ ಬಯಲು ಚಿತ್ರಾಲಯ ಕಲಾಂದೋಲನ ರಾಸ್ಟ್ರಮಟ್ಟಲಿ ಅಂದ್ ಸಂಚಲನ ಮೂಡ್ಸಿತ್. ಇವರ ನಿರ್ದೇಸನಲಿ ವಿಟ್ಲಲಿ ಚೋಮ (ಕಾರಂತರ ಚೋಮನ ದುಡಿ ಆಧರಿಸಿ) ನಾಟಕ ತಯಾರಾಗುಟು. ಸುಳ್ಯದ ಅಭಿನಯ ನಾಟಕ ತಂಡದವು ತಯಾರ್ ಮಾಡ್ದ 'ಚೋಮನ ದುಡಿ' ಮತ್ತೆ 'ನಾಳೆ ಯಾರಿಗೂ ಇಲ್ಲ' ನಾಟಕಲಿ ಮುಕ್ಯ ಪಾತ್ರದಾರಿಯಾಗಿ ರಾಜ್ಯಮಟ್ಟಲಿ ಗುರ್ತ್‌ಸಿಕಂಡೊಳೊ. ಅವು ಬರ್ದ ನೂರಾರ್ ಪುಸ್ತಕಗಳ ಮುಕಪುಟ ಕರ್ನಾಟಕ ರಾಜ್ಯಲಿ ಚಿರ ನೆಂಪಾಗಿ ಉಳ್ದುಟ್ಟು. ಪುತ್ತೂರ್‌ನ ಬಾಲವನಲಿ 2012ರ ಸಮಯಲಿ ಮಕ್ಕಳ್ಗೆ ಪ್ರತೀ ಸನಿವಾರ ಉಚಿತ ನಾಟಕ ತರಬೇತಿ, ನೈಸರ್ಗಿಕ ಬಣ್ಣಗಳ್‌ಂದ ಚಿತ್ರಗಳ್ಗೆ ಬಣ್ಣಲೇಪನ ಮಾಡ್‌ವ ತರಬೇತಿ ನೀಡ್‌ತ್ತಿದ್ದೊ. ಶಿವರಾಮ ಕಾರಂತರ ಕಾದಂಬರಿನ ಆದರಿಸಿದ ಕಲಾ ಚಿತ್ರಗಳ ಆರ್ಟ್‌ಗ್ಯಾಲರಿ ರಾಜ್ಯದ ಕ್ಯಾತ ಕಲಾವಿದರ್‌ಂದ ನಿರ್ಮಾಣ ಮಾಡ್ಸಿದೊ. ಕೊಡಗ್‌ಲಿ ಮಡಿಕೇರಿ ಸಂಸ್ಕ್ರುತಿ ಕಾಲಾಚಿತ್ರ ಶಿಬಿರ ಮಾಡ್ದೊ. 2019ರ‍್ಲಿ ಉತ್ತರಕನ್ನಡ ಜಿಲ್ಲೆನ ಕುಮಟಾ ತಾಲೂಕ್‌ನ ಕಂಡರಕುಳಿ ಗ್ರಾಮಲಿ ಕರಾವಳಿ ಉತ್ಸವಕ್ಕೆ ಕಲಾತ್ಮಕ ಬಂಡೆಗಳ್‌ಲಿ ರಾಕ್‌ಗಾರ್ಡನ್ ಕಲಾಶಿಲ್ಪ ತಯಾರ‍್ಸಿದೊ. ಇದರ‍್ಲಿ ಉತ್ತರಕನ್ನಡ ಜಿಲ್ಲೆನ

ಹಾಲಕ್ಕಿ, ಸಿದ್ದಿ, ಕುಣಬಿ ಮೂಲನಿವಾಸಿ ಜನರ ಬದ್‌ಕ್, ವೇಸಬೂಸನೊ, ಜಾನಪದ ಮತ್ತೆ ವ್ಯಕ್ತಿಚಿತ್ರಣಕ್ಕೆ ಜೀವ ತುಂಬಿಸ್ದೊ.

ಅರೆಬಾಸೆ ಅಕಾಡೆಮಿಗೆ ತಯಾರ್ ಮಾಡ್ದ ಅರೆಬಾಸೆ ಲಾಂಚನ ಅವರ ಕಲಾತ್ಮಕ ಪ್ರತಿಬೆಗೆ ಮಾದರಿಂತ ಹೇಳಕ್. ಈ ಲಾಂಚನ ಅರೆಬಾಸೆ ಪ್ರದೇಸದ ಕ್ರಿಸಿ ಸಂಸ್ಕೃತಿನ ಬಿಂಬಿಸ್ದೆ. ನೊಗ, ನೇಗಿಲ್, ಪನೋರ್, ಗೌಡರ ಹಸೆಮಣೆನ ಸೂರ್ಯ-ಚಂದ್ರರ್, ಮುಕ್ಕಾಲ್ ತೋರಣ, ವೀರ ಸಂಕೇತ ಬಿಲ್ಲ್-ಬಾಣ, ಸ್ವಸ್ತಿಕ, ಭೂಮಿನ ಪಲವಂತಿಕೆನ ಸಾಂಕೇತಿಕ ಕಲ್ಪನೆನ ಕಲಾಚಿತ್ರ ವ್ಯಕ್ತಪಡಿಸಿದೆ.

1980ರ್ಲಿ ಇವರ ಕಲಾಚಿತ್ರಕ್ಕೆ ಜಾನಪದ ಅಕಾಡೆಮಿ ಬಹುಮಾನ, 1983ರ್ಲಿ ಉಡುಪಿಲಿ ನಡ್ದ ನಾಟಕ ನಿರ್ದೇಶನ ಬಹುಮಾನ, 2005 ಮತ್ತೆ 2006ರ್ಲಿ ಮಕ್ಕಳ ಶೈಕ್ಷಣಿಕ ನಾಟಕಕ್ಕೆ ರಾಜ್ಯ ಮಟ್ಟದ ಬಹುಮಾನ, 2006ರ್ಲಿ ಜೆಸಿಐ ರಾಜ್ಯ ಮಟ್ಟದ ಪ್ರಶಸ್ತಿ, ದಕ್ಷಿಣ ಕನ್ನಡ ಜಿಲ್ಲಾ ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಕಾಂತಾವರ ಕನ್ನಡ ಸಂಗದ ನಾ. ಮೊಗಸಾಲೆ ಪುರಸ್ಕಾರ, ಸುಳ್ಯ ತಾಲೂಕ್ ಸಾಹಿತ್ಯ ಸಮ್ಮೇಳನಲಿ ಗೌರವ ಸನ್ಮಾನ, ಕುರುಂಜಿ ವೆಂಕಟ್ರಮಣ ಗೌಡರ ಗೌರವ ಸನ್ಮಾನ, ಅಭಿನಯ ಸುಳ್ಯಂದ ಗೌರವ ಸನ್ಮಾನ, ಮಂಡ್ಯ ಗುರುದೇವ ನಾಟಕ ಅಕಾಡೆಮಿನ ಗೌರವ ಸನ್ಮಾನ. ಹಿಂಗೆ ಹಲವು ಸನ್ಮಾನ ಗೌರವ ಪುರಸ್ಕರಗ ಸೋನಾ ಅವ್ಕೆ ಸಂದುಟು.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಎರಡನೆಯ ಅವದಿನ ಸದಸ್ಯರೋಗೊಳೊ. ಈಗ ಅರೆಭಾಷೆ ಅಕಾಡೆಮಿ ಮೋಹನ್ ಸೋನ ಅವರ ಸಾಕ್ಷ್ಯಚಿತ್ರನ ತಯಾರಿಸ್ತಾ ಇರೋದ್ ಸಮಯೋಚಿತ. ಸೋನನವು ಇನ್ನೊಮ್ಮೆ ಸುಳ್ಯಲಿ ಹುಟ್ಟಿ ಬರಲಿಂತ ಹಾರೈಸೋಣ.

**ಡಾ. ವಿಶ್ವನಾಥ ಬದಿಕಾನ**
ಮೊಬೈಲ್ : 9449615974




# ಗಾಂಧೀದರ್ಶನ



**ಮಾವಜಿ ರಾಮಣ್ಣ ಅಚ್ಯುತ**

ಗುರುದೇವ್ ರಬೀಂದ್ರನಾಥ್ ಟಾಗೋರೊವು ಮೋಹನ್‌ದಾಸ್ ಕರಮ್‌ಚಂದ್ ಗಾಂಧಿನ 'ಮಹಾತ್ಮ'ಂತ ಕರ್‍ದೊ. ಸತ್ಯ ಅಹಿಂಸೆಗಳ್‌ಗೆ ಪ್ರತೀಕರಾಗಿದ್ದ ಗಾಂಧಿ ರಾಜಕೀಯ ರಂಗಲಿ ಹಿಂದೆಂದೂ ಅನ್‌ಭವಿಸಿರದ ಅಪ್ರತಿಮ ಚೇತನ. ಗಾಂಧಿಗೆ 'ಮಹಾತ್ಮ' ಬಿರ್‌ದ್‌ನ ಪಟ್ಟಕಟ್ಟಿದ ಟಾಗೋರೊವು ಇನ್ನೊಬ್ಬ ಮೇರುಪರ್ವತ, ಉದ್ದಾಮ ಕವಿ. ನಮ್ಮ ದೇಶಕ್ಕೆ ಸುರೂನ 'ನೋಬೆಲ್ ಪುರಸ್ಕಾರ' ಗಳಿಸಿದೊವು. 'ಗೀತಾಂಜಲಿ' ಅವರ ಪ್ರಶಸ್ತಿ ವಿಜೇತ ಕೃತಿ. ಅವರ 'ಜನಗಣಮನ ಅಧಿನಾಯಕ' ನಮ್ಮ ರಾಷ್ಟ್ರಗೀತೆ. ಟಾಗೋರರ ಇನ್ನೊಂದ್ ರಚನೆ, 'ಸೋನಾರ್ ಬಾಂಗ್ಲ' ನಮ್ಮ ನೆರೆರಾಷ್ಟ್ರ ಬಾಂಗ್ಲಾದೇಶದ ರಾಷ್ಟ್ರಗೀತೆ!

**ಯಾರ್ ಈ ಗಾಂಧಿ?**

ಬೋಳ್ ತಲೆ, ಬೊಚ್ಚ್ ಬಾಯಿ, ಅಗಲ ಕೆಬಿಗಳ ಉರ್‌ಟ್ ಕನ್ನಡಕನ ಧರಿಸಿದ ರಾಷ್ಟ್ರಪಿತ ಬಾಪು ಸಣ್ಣ ಮಕ್ಕಳ್‌ಗೂ ಗೊತ್ತುಟು. ಸೊಂಟಂದ ಮೊಣ್ಕಾಲ್ ವರೆಗೆ ಬಿಳೀ ಪಂಚೆನ ಕಚ್ಚೆ ಬಿಗ್ದ್ ಬರೀ ಮೈಯಿಲಿ ಇದ್ದ್ ಹೆಗಲ್ ಮೇಲೆ ಅಂಗವಸ್ತ್ರ



ಹಾಕಿ ಊರ್‌ಗೋಲ್ ಹಿಡ್ಕಂಡ್ ರಭಸಲಿ ನಡಿವ ಪ್ರಬುದ್ಧ ನೇತಾರ ಗಾಂಧಿನ ಎಲ್ಲಾ ಮಾಧ್ಯಮಗಳ್ಲಿ ನೋಡ್ತ್ತನೇ ಇದ್ದವೆ. ಸೊಂಟಕ್ಕೆ ಸೆಕ್ಕಿಸಿದ ನ್ಯೇತಾಡುವ ಸಣ್ಣ ಗಡಿಯಾರ ಅವರ ಸಮಯಪ್ರಜ್ಞೆನ ನೆನ್ಪ್‌ಸಿದೆ.

ಗಾಂಧಿನ ಊರ್‌ಗೋಲ್‌ಗೂ ಕರ್ನಾಟಕಕ್ಕೂ ಒಂದು ಕುತೂಹಲದ ನಂಟತನ ಉಟ್ಟು. ಗಾಂಧಿನ ಆಪ್ತರಾಗಿದ್ದ ಕಾಕಾ ಕಾಲೇಲ್ಕರೊವು ಅವರ ಸ್ನೇಹಿತ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಯವರ ಆಹ್ವಾನಲಿ ಮಂಜೇಶ್ವರಕ್ಕೆ (ಈಗ ಕೇರಳಕ್ಕೆ ಸೇರಿಟು) ಹೋದೊ. ಕಾಲೇಲ್ಕರ್ ವಾಪಾಸಾಕನ ನೆನ್ಪ್‌ನ ಗುರುತಾಗಿ ಪೈಯೊವು ತಾನ್ ಹಿಡಿತಿದ್ದ ಊರ್‌ಗೋಲ್‌ನೇ ಕೊಟ್ಟೊ. ಇದರ ಕಾಲೇಲ್ಕರವು ಉಪ್ಪುನ ಸತ್ಯಾಗ್ರಹಲಿ ದಾಂಡೀಯಾತ್ರೆಗೆ ಹೊರಟ ಗಾಂಧಿಗೆ ಗೌರವಲಿ ಅರ್ಪಿಸಿದೊ. (ಶಿಕ್ಷಣತಜ್ಞ ಡಾ. ಗುರುರಾಜ ಕರಜಗಿಯವರ ಚಿಂತನೆ, ಗಾಂಧಿ ಸ್ಮರಣೆ ಪ್ರಸಾರಗಳ್‌ಂದ ಹೆರ್ಕಿದ ಕೆಲೊವು ಮಾಹಿತಿಗಳ ಕೃತಜ್ಞತೆಲಿ ಬಳಸಿಕಂಡೊಳೆ.)

ಗುಜರಾತ್‌ನ ಪೋರ್‌ಬಂದರ್‌ಲಿ ಅಪ್ಪ ಕರಮ್‌ಚಂದ್ ಗಾಂಧಿ, ಅವ್ವ ಪುತಲೀಬಾಯಿಗೆ ಅಕ್ಟೋಬರ್ 2, 1869ರ್ಲಿ ಜನಿಸಿದ ಕೂಸೇ ಮೋಹನ್‌ದಾಸ್ ಕರಮ್‌ಚಂದ್ ಗಾಂಧಿ. ಕರಮ್‌ಚಂದ್ ದಂಪತಿನ ಮುದ್ದ್‌ನ ಈ ಕಡೇ ಮಂಜ 'ಮೋನಿಯ'ನ (ಮೋಹನ್‌ದಾಸ್‌ನ) ಅಂತ್ಯ ಆದ್ ಜನವರಿ 30, 1948ರ ಸಂಜೆ ಪಿಸ್ತೂಲ್‌ನ ಗುಂಡ್‌ನೇಟಿಗೆ ಬೊಲಿಯಾಗಿ.

ಜಗತ್ತ್‌ನ ಇತಿಹಾಸಕ್ಕೆ ಸುಂದರ ಅಧ್ಯಾಯ ಆಗಿ ಸೇರ್ದ ಮಹಾತ್ಮನ ಬಗ್ಗೆ ನಾಲ್ಕೈದ್ ಪುಟಗಳ್ಲಿ ಬರಿದುಂತೇಳ್ರೆ ಸಣ್ಣ ಕರ್‌ಗಳ ಹಟ್ಟಿಲಿ (ಕಂಚಿಲ್‌ಲಿ) ಆನೆನ ಕಟ್ಟಿಹಾಕುವ ಪ್ರಸಂಗ! 'ನನ್ನ ಜೀವನವೇ ನನ್ನ ಸಂದೇಶ'ಂತ ಗಾಂಧಿ ಹೇಳ್ದೊ. ಮಹಾಪುರುಷರ್‌ಗ ಉಪದೇಶ ಮಾಡಿಕೆ ಮುಂದೆ ತಾವೇ ನಡ್ದ್ ತೋರ್ಸಿದ್ದವೆ. ಪ್ರಸ್ತುತ, ಗಾಂಧಿನ ಜೀವನದ ಕೆಲೊವು ಗಟನೆಗಳ ನೋಡೊನೊ:

**1. ಸತ್ಯ, ಪರಿಶುದ್ಧ ನಡವಳಿಕೆ**

ವೈಷ್ಣವ ಸಂಪ್ರದಾಯದ ಗಾಂಧಿಗ ಸಸ್ಯಾಹಾರಿಗ. ಇನ್ನೂ ಹದಿನೈದ್ ತುಂಬದ ಹೈದ ಮೋಹನ್‌ದಾಸ್ ಶಾಲೆಲಿ ಬೇರೆ ಹುಡ್ಗರೊಟ್ಟಿಗೆ ಸೇರಿಕಂಡ್, ಮಾಂಸಾಹಾರ ತಿಂದ್ ಗಟ್ಟಿಮುಟ್ಟಾಗಿ ಬ್ರಿಟಿಷರ ದೇಶಂದ

ಓಡ್ಸೊಕುಂಕೇಳ್ವ ಭ್ರಮೆಲಿ, ಮಾಂಸಾಹಾರ ಸುರುಮಾಡ್ತ್; ಸಿಗರೇಟ್ ಸೇದುದೂ ಸೇರಿಕಂಡತ್. ಇವ್ಕೆಲ್ಲ ದುಡ್ಡು ಬೇಕಲೆ! ಮೋಹನ್‌ದಾಸ್ ಮನೆಕೆಲ್ಸದವನ ಜೇಬ್‌ಂದ ದುಡ್ಡ್ ಸಹ ಕದ್ದತ್. ಇವೆಲ್ಲ ಮನೆಯೊವ್ಕೆ ಗೊತ್ತಿಲ್ಲದೆ ನಡ್ದ ವ್ಯವಹಾರಗ. ಈ ಕಳ್ಳಾಟ ಸುಮಾರ್‌ಗೆ ಒಂದ್ ವರ್ಷ ಕಾಲ ನಡ್ತ್. ಆದರೆ ಅವನ ಒಳಮನ್ಸ್ ವಿರೋಧಿಸ್‌ತಿತ್ತ್, ದುರಾಭ್ಯಾಸಗಳ್‌ಂದ ಹೊರಬಾಕೆ ಪ್ರೇರೇಪಿಸ್‌ತ್ತಿತ್ತ್.

ಕರಮ್‌ಚಂದ್ ಮೂಲವ್ಯಾಧಿಲಿ ನರಳ್‌ತ್ತಿದ್ದ್ ಹೆಚ್ಚಾಗಿ ಮರದ ಹಲಗೆನ ಮೇಲೆ ಮಲಗಿಕಂಡ್ ಇರ್‌ತ್ತಿದ್ದೊ. ಸಿಡ್‌ಕ ಅಪ್ಪನ ಮೋರೆ ನೋಡಿ ಮಾತಾಡ್‌ವ ಧೈರ್ಯ ಇಲ್ಲದ ಮೋಹನ್‌ದಾಸ್ ತನ್ನ ತಪ್ಪುಗಳ ಕಾಗದಲಿ ಬರ್ದ್, ತನಿಗೆ ಶಿಕ್ಷೆ ಕೊಡೊಕುಂತಳೂ ಕ್ಷಮಿಸೊಕುಂತಳೂ ಬೇಡಿಕಂಬಕೆ ನಿರ್ಧರ್ಸಿತ್. ಅಪ್ಪ ಬೆತ್ತ ತಕಂಡ್ ಹೊಡಿಯಲಿ, ಆದರೆ ಕ್ಷಮಿಸಲೀಂತೇಳ್ವ ಬಯಕೆ. ಒಂದ್ ದಿನ ಮಲ್ಕಂಡಿದ್ದ ಅಪ್ಪನ ಹಕ್ಕಲೆ ಹೋಗಿ ಕಾಗದನ ಕೊಟ್ಟ್ ಅವರ ಪ್ರತಿಕ್ರಿಯೆಗಾಗಿ ಕಾಲ್ ಹಕ್ಕಲೆ ನಿತ್ತ್‌ಕಂಡತ್. ಅಪ್ಪ ಕಷ್ಟಲಿ ಎದ್ದ್ ಕುದ್ದ್ ಕಾಗದನ ಓದಿದೊ. ಅವರ ಕಣ್ಣ್‌ಗಳ್‌ಂದ ನೀರ್ ಸುರಿಯತ್ತನೇ ಇತ್ತ್. ಕಣ್ಣೀರ್‌ಲಿ ಒದ್ದೆ ಆದ ಕಾಗದನ ಏನೂ ಹೇಳದೆ ಅಲ್ಲೇ ಹರ್ದ್ ಹಾಕಿ ಮೌನಲಿ ಪುನಃ ಮಲ್ಗಿಕಂಡೊ. ಅಪ್ಪ ಖಂಡಿತಾ ಕ್ಷಮಿಸಿಯೊಳೋಂತ ಮೋಹನ್‌ದಾಸ್‌ಗೆ ಅರ್ಥ ಆತ್; ಬಿಕ್ಕಳ್ಸಿ ಬಿಕ್ಕಳ್ಸಿ ಅಳ್‌ತ್ತಾ ಅಪ್ಪನ ಪಾದಗಳ್ಲಿ ಹಣೆ ಇರ್ಸಿ, 'ಅಪ್ಪಾ, ಇನ್ನ್ ಮುಂದೆ ಎಂದ್‌ಗೂ ಸುಳ್ಳ್ ಹೇಳಿಕಿಲ್ಲೆ, ತಪ್ಪು ಮಾಡಿಕಿಲ್ಲೆ'ಂತ ಪ್ರತಿಜ್ಞೆ ಮಾಡ್ತ್. ಮಂಜನ ಪ್ರಾಮಾಣಿಕತನದ ಕೋಮಲ ಮನ್ಸ್‌ನ ತಿಳ್ಕಂಡ್ ಕರಮ್‌ಚಂದ್ ಇನ್ನೊಮ್ಮೆ ಗಳಗಳಗಳಾಂತ ಕಣ್ಣೀರ್‌ನ ಹೊಳೆ ಹರ್ಸಿದೊ.

ಅಪ್ಪ, ಮಂಜನ ಕಣ್ಣೀರ್ ಪ್ರವಾಹಗಳ ಮಿಲನಲಿ ಸತ್ಯಾವತಾರಿಯೊಬ್ಬ ಜನ್ಮ ಎತ್ತಿತ್ತ್!

* * *

ಮೋಹನ್‌ದಾಸ್ ಗಾಂಧಿ ಬ್ಯಾರಿಸ್ಟರ್ ಆಕುಂತ ಕಾನೂನು ವಿದ್ಯಾಭ್ಯಾಸಕ್ಕೆ ಇಂಗ್ಲೆಂಡ್‌ಗೆ ಹೋಕೆ ತಯಾರಾದೊ. ವಿದೇಶಕ್ಕೆ ಹೋಗುದರ ನಿಷೇಧಿಸಿದ ಸ್ವಜಾತಿಯವರ ಬಹಿಷ್ಕಾರನ ತಳ್ಳಿಹಾಕಿ, ಅಣ್ಣ (ಅಪ್ಪ ಆಗಳೇ ತೀರಿಹೋಗಿದ್ದೊ) ಹಾಂಗೂ ಅವ್ವನ ಒಪ್ಪಿಗೆ ಪಡ್ದೊ.

ಪುತ್ಲೀಬಾಯಿ ಮಂಜಂದ ಮಾಂಸಾಹಾರ ಮದ್ಯಪಾನಗಳ ನಿಷೇಧ ಅಲ್ಲದೆ ಪರಸ್ತ್ರೀಯರ್‌ಂದ ದೂರ ಇರಕಾದ ಪರಿಶುದ್ಧ ನಡವಳಿಕೆನ ವಚನ ಪಡ್ಕಂಡೊ. ತನ್ನ ಸಹಧರ್ಮಿಣಿ ಕಸ್ತೂರ್‌ಬಾನನೂ ಆಗ ಇದ್ದ ಸಣ್ಣ ಕೂಸ್‌ನನೂ ಹಿಂದೆ ಬುಟ್ಟ್ ಗಾಂಧಿ ಇಂಗ್ಲೆಂಡ್‌ಗೆ ಪಯಣ ಬೆಳ್ಸಿದೊ.

ಶಪಥಲಿದ್ದ ಗಾಂಧಿ ಇಂಗ್ಲೆಂಡ್‌ಲಿ ಸಸ್ಯಾಹಾರದ ಊಟ ಸಿಕ್ಕದಿರ್‌ಕನ ಅರೆಹೊಟ್ಟೆಲಿ ಎಷ್ಟೋ ಕಾಲ ಕಳ್ದದ್ ಇತ್ತ್. ಗಾಂಧಿ ವಚನ ಕೊಟ್ಟರೆ ಅದ್ ಶಿಲಾಲಿಖಿತ! ಮೂರ್ ವರ್ಷ ಇಂಗ್ಲೆಂಡ್‌ಲಿ ಇದ್ದ್ ಬ್ಯಾರಿಸ್ಟರ್ ಪದವಿ ಪಡ್ದ್ ತಾಯ್ನಾಡ್‌ಗೆ ವಾಪಾಸಾಕನ ಆಘಾತ ಒಂದ್ ಕಾದ್ ನಿತ್ತಿತ್ – ತನ್ನ ಸರ್ವಸ್ವ ಆಗಿದ್ದ ಹೆತ್ತವ್ವ ಸ್ವರ್ಗಸ್ಥರಾಗಿದ್ದೊ. ದುಃಖಲಿ ಓದ್ ಹಾಳಾಗದಿರ್ಲೀಂತ ಅಣ್ಣ ವಿಷಯನ ತಿಳ್ಸಿತ್ತ್‌ಲೆ.

## 2. ದಕ್ಷಿಣ ಆಫ್ರಿಕಲಿ – ಅಹಿಂಸೆ, ಸಮಭಾವ, ಸತ್ಯಾಗ್ರಹ

ಬೊಂಬಾಯಿಲಿ ವಕೀಲ ವೃತ್ತಿ ಸುರುಮಾಡ್ದ ಮೋಹನ್‌ದಾಸ್ ಏನೂ ಪ್ರಗತಿ ಸಾಧಿಸಿತ್ಲೆ. ಇಷ್ಟರ್ಲಿ ದಕ್ಷಿಣ ಆಫ್ರಿಕಲಿದ್ದ ಭಾರತದ ಮೂಲದ ಒಂದ್ ಕಂಪೆನಿಗೆ ಬ್ಯಾರಿಸ್ಟರ್ ಒಬ್ಬನ ಅವಶ್ಯಕತೆ ಇತ್ತ್. ಇದ್ಕೆ ಆಯ್ಕೆ ಆದ ಗಾಂಧಿ ಒಂದ್ ವರ್ಷಕ್ಕೆಂತ ದಕ್ಷಿಣ ಆಫ್ರಿಕಕ್ಕೆ ಹೋದೊ.

**(i) ಅಹಿಂಸೆ :** ಬ್ರಿಟಿಷರ ವಸಾಹತ್ ಆಗಿದ್ದ ದಕ್ಷಿಣ ಆಫ್ರಿಕ ವರ್ಣಭೇದದ ತವರ್ಮನೆನೇ ಆಗಿತ್ತ್. ಬಿಳಿಯರಲ್ಲದೊವು ಎಲ್ಲಿಲ್ಲದ ಶೋಷಣೆಗೆ ಗುರಿಯಾಗ್‌ತ್ತಿದ್ದೊ. ಬಿಳಿಯರ್ ಭಾರತೀಯರ 'ಕೂಲಿಗ'ಂತ ಕರೀತಿದ್ದೊ. ಒಮ್ಮೆ ಗಾಂಧಿ ರೈಲ್‌ಲಿ ಫಸ್ಟ್ ಕ್ಲಾಸ್ ಟಿಕೆಟ್‌ಲಿ ಪ್ರಯಾಣಿಸ್‌ತ್ತಿರ್‌ಕನ ಬಿಳಿಯರ್ ಈ 'ಬ್ಯಾರಿಸ್ಟರ್ ಕೂಲಿ'ನೊಟ್ಟಿಗೆ ಅದೇ ಕಂಪಾರ್ಟ್‌ಮೆಂಟ್‌ಲಿ ಕುದ್ರಿಕೆ ನಿರಾಕರ್ಸಿ ತಾರಾಮಾರ ಬೊಯ್ದ್ ಪ್ಲಾಟ್‌ಫಾರಂಗೆ ದೂಡಿಹಾಕಿದ್ದೊ. ಇನ್ನೊಮ್ಮೆ ಕುದ್‌ರೆಗಾಡಿ (ಕೋಚ್) ಪ್ರಯಾಣಲಿ ಗಾಂಧಿ ಕುದ್ದಿದ್ದ ಸೀಟೇ ಬೇಕುಂತ ಬಿಳಿಯ ಗಲಾಟೆ ಮಾಡಿರೂ ಬುಟ್ಟ್‌ಕೊಟದಕ್ಕೆ ಅಂವ ಹೊಡ್ದ್ ಕೆಬಿಲಿ ಎಲ್ಲಾ ರಕ್ತ ಬಂದ್ ಪ್ರಾಣಾಯಾಯಲಿದ್ದರೂ ಸೀಟ್‌ನ ಬುಟ್ಟತ್‌ಲ್ಲೆ. ಇದ್ ಅಹಿಂಸೆನ ಗೆಲುವುಂತ ಗಾಂಧಿ ಅವರ ಆತ್ಮಚರಿತ್ರೆಲಿ ದಾಖಲಿಸಿಯೊಳೊ. ಅವರ ಕಂಪೆನಿನ ಕೇಸ್ ಗ್ರೈಸಿದ ಸಮಯಲೇ ಮುಕ್ತಾಯ ಆದರೂ ಕಂಪೆನಿಯೊವು ಗಾಂಧಿನ ಬುಡಿಕೆ ತಯಾರಿತ್ಲೆ. ಅಲ್ಲಿನೇ ವಕೀಲ ವೃತ್ತಿಲಿದ್ದ್ ಗಾಂಧಿ ಸಂಸಾರ ಸಮೇತ ನೆಲ್ಸಿದೊ.

**(ii) ಸಮಭಾವ :** ಕಂಪೆನಿಯೊವು ಒದ್ಗ್‌ಸಿದ ದೊಡ್ಡ ಮನೆನ ಒಂದ್ ಭಾಗಲಿ ಗಾಂಧಿನ ಸಂಸಾರದ ವಾಸ. ಇತರ ನೌಕರರ್ ಬೇರೆ ಬೇರೆ ಕೋಣೆಗಳ್ಲಿ ಇದ್ದೊ. ಈ ಕಟ್ಟಡಲಿ ಮನಿನ ನೀರ್ ಹೋಕೆನೂ ಸೌಕರ್ಯ ಇದ್ದಿರದೆ ಪ್ರತಿ ಕೋಣೆಗೂ ಮೂತ್ರದ ಮಡ್ಕೆ ಇತ್ತ್. ಶುಚಿಮಾಡಿಕೆ ವ್ಯವಸ್ಥೆ ಇಲ್ಲದರ್‌ಂದ ಉಪಯೋಗಿಸೊವೇ ಶುಚಿಮಾಡಕಾದ್ದ್ ನಿಯಮ. ಎಲ್ಲರ್ನೂ ಸಮಾನತೆಲಿ ಕಾಣ್‌ತಿದ್ದ ಗಾಂಧಿ (ಕಸ್ತೂರ್‌ಬಾನೂ) ಬೇರೆಯವರ ಮಡ್ಕೆಗಳನು ತೊಳಿಯೊತ್ತಿದ್ದೊ. ಅಷ್ಟರ್ಲಿ ಅಸ್ಪೃಶ್ಯರ ಹಿನ್ನೆಲೆನ ಕ್ರಿಶ್ಚಿಯನ್ ನೌಕರ ಒಬ್ಬ ಒಂದ್ ಕೋಣೆಗೆ ಸೇರ್ತ್. ಅಂವ ಮಡ್ಕೆನ ಶುಚಿ ಮಾಡ್‌ತ್ತಿತ್ಲೆ.

ಅವನ ಮಡ್ಕೆನ ಶುಚಿಮಾಡಿಕೆ ಅಸಹ್ಯಪಟ್ಟ್ ಒಮ್ಮೆ ಕಸ್ತೂರ್‌ಬಾ 'ಇದ್ಯಾವ ಗ್ರಾಚಾರ'ಂತ ಗೊಣಗಿಕಂಡ್ ಹೋಕನ ಗಾಂಧಿ, 'ಇಂತಾ ವರ್ತನೆನ ನನ್ನ ಮನೆಲಿ ಸಹಿಸ್‌ಕಿಲ್ಲೆ; ಸೇವೆನ ಸಂತೋಷಲೇ ನಗುಮುಖಲಿ ಮಾಡೊಕು'ಂತ ಸಿಟ್ಟ್‌ಲ್ ಹೇಳ್ದೊ. ಕಸ್ತೂರ್‌ಬಾ ಸಹ ಸಿಟ್ಟ್‌ಲಿ, 'ಓಹೋ, ಇದ್ ನಿಮ್ಮ ಮನೆ ಆದರೆ ನೀವೇ ಇಸಿಕಣಿ, ನಾ ಹೋನೆ'ಂತ ಕಣ್ಣೀರ್ ಹಾಕಂಡ್ ಗಡ್ಸ್‌ಲೇ ಹೇಳ್ದೊ. ಗಾಂಧಿಗೆ ಸಿಟ್ಟ್ ನೆತ್ತಿಗೇರಿ ಹೆಣ್ಣ್‌ನ ಕೈ ಹಿಡ್ದ್ ಎಳೀತಾ, 'ನಡಿ ಹೊರೆಗೆ'ಂತ ಮನೆನ ಗೇಟ್‌ನ ತೆಗ್ದ್ ದೂಡಿಕೆ ತಯಾರಾದೊ. ಆಗ ಕಸ್ತೂರ್‌ಬಾ, ನೀವ್ಗೇನ್ ಸೊಯೆ ಇಲ್ಲೆನೊ? ಬಂಧುಬಳಗದವೂ ಇಲ್ಲದ ಪರದೇಶಲಿ ಈ ಅಪರಾತ್ರಿಲಿ ಎಲ್ಲಿಗೆ ಹೋಗಲಿ? ನಾಚಿಕೆ ಆದ್ಲೆನೊ ಈ ರೀತಿ ವರ್ತಿಸಿಕೆ? ಕಣ್ಣೀರ್ ಸೊರ್ಸಿಕಂಡ್ ಗಂಡಂಗೆ ಬೊಯ್ದೊ. ಗಾಂಧಿನ ಕೋಪ ಒಮ್ಮೆನೇ ಇಳ್ದ್ ಹೆಣ್ಣ್‌ನ ಮನ ಒಳೆಗೆ ಕರ್ಕಂಡ್ ಬಂದ್ ಕ್ಷಮೆ ಯಾಚ್‌ಸಿದೊ: 'ಸಪ್ತಪದಿ ತುಳ್ದ್ ಕೈಹಿಡ್ದವಳೊಟ್ಟಿಗೆ ಗೌರವಲಿ ಬೊದ್ಕುದು ನನ್ನ ಜವಾಬ್ದಾರಿಕೆ. ನಿನ್ನೊಟ್ಟಿಗೆ ಇನ್ನೆಂದೂ ಕೋಪ ಮಾಡಿಕಿಲ್ಲೆ. ಪ್ರತಿ ಮಹಿಳೆನನೂ ಗೌರವಿಸಿನೆ.' ಇದ್ ಗಾಂಧಿ ಬೊದ್ಕಿದ ರೀತಿ!

**(iii) ಸತ್ಯಾಗ್ರಹ :** ಸರ್ಕಾರ ಜಾರಿಗೆ ತಂದ ಜನವಿರೋಧಿ 'ಕಪ್ಪು ಕಾಯಿದೆ (Black Act)ನೆದ್‌ರ್ ಹೋರಾಡ್ದು ಜನನಾಯಕ ಗಾಂಧಿನ ಆದ್ಯ ಕರ್ತವ್ಯ ಆತ್. ಸತ್ಯ, ಅಹಿಂಸೆ, ಶಾಂತಿ, ಶಿಸ್ತ್, ಸಹನೆಗಳ 'ಸತ್ಯಾಗ್ರಹ'ಂತೇಳ್ವ ಹೊಸ ಚಳುವಳಿ ಜನ್ಮತಾಳ್ತ್! ಕಾಯಿದೆನ ಪ್ರತಿಭಟಿಸುವ ಒಂದ್ ಸಾವಿರ ಸತ್ಯಾಗ್ರಹಿಗ ಮೆರವಣಿಗೆ ಹೋಕನ ಬ್ರಿಟಿಷ್ ಅಧಿಕಾರಿ

ಜನರಲ್ ಸ್ಮಟ್ಸ್ ಕುದ್‌ರೆ ಮೇಲೇರಿ ಬಂದ್ ಗಾಂಧಿನ ಎದೆಗೆ ಒದ್ದದಲ್ಲಿ ನೆಲಕ್ಕೆ ಬಿದ್ದ ಗಾಂಧಿನ ಮೋರೆಗೆ ಪೆಟ್ಟಾಗಿ ಎದ್‌ರ್‌ನ ಒಂದ್ ಹಲ್ಲ್ ಮುರ್ದ್ ಹೋತ್. ಗಾಂಧಿನ ಮೂರ್ ತಿಂಗಳಿಗೆ ಜೈಲಿಗೆ ಹಾಕಿದೊ.

ಗಾಂಧಿನ ಸಹಕೈದಿ ಸಮಗಾರನೊಬ್ಬಂದ ಚಪ್ಪಲಿ ಹೊಲಿದರ ಕಲ್ತೊ. ಜೈಲ್‌ವಾಸ ಮುಗ್ಸಿ ಬಾಕನ ತಾನೇ ಹೊಲ್ದಿದ್ದ ಎರಡ್ ಜೊತೆ ಚಪ್ಪಲ್‌ಲಿ ಒಂದ್ ತಾನೇ ಇರ್ಸಿಕಂಡ್ ಇನ್ನೊಂದರ ಏನೂ ಕುಹಕ ಇಲ್ಲದೆ ಸ್ನೇಹಭಾವಲಿ ಜನರಲ್ ಸ್ಮಟ್ಸ್‌ಗೆ ಕೊಟ್ಟೊ. ಸತ್ಯಾಗ್ರಹ ಎಂಟ್ ವರ್ಷಲಿ ಜಯ ಗಳ್‌ಸಿತ್!

ಇಪ್ಪತ್ತೊಂದ್ ವರ್ಷ ದಕ್ಷಿಣ ಆಫ್ರಿಕಲಿದ್ದ್ ಕಡೆಗೂ 1914ರ್ಲಿ ಗಾಂಧಿ ಸ್ವದೇಶಕ್ಕೆ ಬಂದ್ ನೆಲ್ಸಿದೊ. ಅವರ 70ನೇ ವರ್ಷದ ಹುಟ್ಟಿದ ದಿನಕ್ಕೆ ಸರಿಯಾಗಿ ಜನರಲ್ ಸ್ಮಟ್ಸ್ ಶುಭಾಶಯಗಳ ತಿಳ್ಸ್‌ತ್ತಾ ಹೀಂಗೆ ಬರ್ದಿತ್ತ್: 'ಹಗೆತನ ಅಂದರೆ ಏನ್‌ಂತಲೂ ತಿಳಿಯದ ಮಹಾತ್ಮನೊಟ್ಟಿಗೆ ವ್ಯವಹರ್‌ಸುವ ಭಾಗ್ಯ ಸಿಕ್ಕಿದ ನನ್ನ ಜನ್ಮ ಸಾರ್ಥಕ ಆತ್.'

### 3. ದೇಶ ಸ್ವಾತಂತ್ರ್ಯ ಗಳ್‌ಸಿತ್

ಸ್ವಾತಂತ್ರ್ಯಕ್ಕಾಗಿ ಹೋರಾಡ್ದ ದೇಶಭಕ್ತರ, ವೀರಯೋಧರ ಬಲಿದಾನ ಚಿರಸ್ಮರಣೀಯ. ಬ್ರಿಟಿಷರ 'ವಿಭಜಿಸ್ ಆಳ್' (Devide and Rule) ಇತ್ಯಾದಿ ತಂತ್ರಗಳ್‌ಗೆ ಸಮರ್ಪಕದ ಪ್ರತ್ಯುತ್ತರ ಬೇಕಿತ್ತ್. ಅತ್ತ, ಗಾಂಧಿನ ತತ್ವಸಿದ್ಧಾಂತಗಳ್‌ಗೆ ದಕ್ಷಿಣ ಆಫ್ರಿಕ ಪ್ರಯೋಗಶಾಲೆನೇ ಆಗಿತ್ತ್. ಭಾರತಕ್ಕೆ ಬಂದ್ ನೆಲ್ಸಿದ ಗಾಂಧಿಗೆ ಸ್ವದೇಶದ ಅಸಂಖ್ಯಾತ ಶಿಸ್ತ್‌ನ ಸತ್ಯಾಗ್ರಹಿಗ ಬೆನ್ನ್‌ಲ್‌ಬಾದೊ. ಗಾಂಧಿನ ನೇತೃತ್ವದ ಸತ್ಯಾಗ್ರಹ, ಸ್ವಾತಂತ್ರ್ಯ ಗಳ್‌ಸಿದ್ ದೇಶದ ಅಮೋಘ ಜಯ!

ದೇಶದ ಅಭ್ಯುದಯ, ರಕ್ಷಣೆ ಪ್ರತಿಯೊಬ್ಬನ ಹೊಣೆಗಾರಿಕೆ. ಸಮಭಾವಲಿ ಐಕ್ಯತೆ ಗಳ್‌ಸುದು ಮೂಲಮಂತ್ರ. ದಲಿತೋದ್ಧಾರಕ್ಕೆ ಗಾಂಧಿ ಶ್ರಮಿಸಿದ್ ಗಮನಾರ್ಹ. ಸ್ವಾಮಿ ವಿವೇಕಾನಂದರ ಕಳಕಳಿನ ಹೇಳಿದೆ ಇದ್: "ಎಂದ್ ಭಾರತ ದೇಶ 'ಮೇಚ್ಛ' ಶಬ್ದನ ಸೃಷ್ಟಿಸಿತೋ ಅಂದೇ ಅದರ ಅಧೋಗತಿ ನಿರ್ಣಾಯಕ ಆತ್."

'ಸತ್ಯನೇ ದೇವರ್' (Truth is God) ಅಂತ ಅನ್‌ಸರಿಸಿದ ಮಹಾತ್ಮ ಗಾಂಧಿನ ಜೀವನದ ಮೌಲ್ಯಗ ದಾರಿದೀಪ ಆಗಲಿ.

**ಗೌರವಾರ್ಪಣೆ, ಗುಣಗಾನ**

ಯಾವ ಅಧಿಕಾರನನೂ ಹಿಡ್ದಿರದ ಮೋಹನ್‌ದಾಸ್ ಕರಮ್‌ಚಂದ್ ಗಾಂಧಿನ ನಿಧನಕ್ಕೆ ವಿಶ್ವಸಂಸ್ಥೆ ಭಾರತದ ಧ್ವಜನ ಅರ್ಧಕ್ಕೆ ಇಳ್ಸಿ ಗೌರವ ಸಲ್ಲಿಸಿತ್. ಇಷ್ಟೇ ಅಲ್ಲ, ಅಭೂತಪೂರ್ವ ಘಟನೆ ಆಗಿ, ಜಗತ್ತ್‌ನ ಎಲ್ಲಾ ದೇಶಗಳ ಧ್ವಜಗಳ್ನೂ ಅರ್ಧಕೆ ಇಳ್‌ಸಿ, 'ಇದ್ ಬರೇ ಗಾಂಧಿನ ಕೊಲೆ ಅಲ್ಲ, ಇದ್ ಮನುಷ್ಯತ್ವದ ಕೊಲೆ'ಂತ ವಿಶ್ವಸಂಸ್ಥೆನ ಸೆಕ್ರೆಟರಿ ಜನರಲ್ ವರ್ಣಿಸಿದೊ.

ಗುಣಗಾನದ ಮಹಾಪೂರಲಿ ವಿಶ್ವದ ಗಣ್ಯರ್ ಇಬ್ಬೊರ್ ಗಾಂಧಿಗೆ ಅರ್ಪಿಸಿದ ಚರಮಗೀತೆಗಳ ನೋಡಿ:

(i) ವಿಜ್ಞಾನಿ ಆಲ್ಬರ್ಟ್ ಮಿನ್‌ಸ್ಟಿನ್ (Albert Einstein):

ರಕ್ತ ಮಾಂಸಗಳ್‌ಂದ ಕೂಡ್ದ ಇಂಥ ವ್ಯಕ್ತಿಯೊಬ್ಬ ಭೂಲೋಕಲಿ ನಡ್ದಾಡಿತ್ತ್‌ಂತ ಮುಂದೆನ ಜನಾಂಗಗ ನಂಬುದು ಕಷ್ಟ.

(ii) ಅಮೇರಿಕಾದ ಕಪ್ಪು ಜನರ ಮುಖಂಡ, ಗಾಂಧಿಯನ್‌ಂಕಳೇ ಹೆಸರ್ ಪಡ್ದಿದ್ದ ಮಾರ್ಟಿನ್ ಲುಥರ್ ಕಿಂಗ್ (Martin Luther King):

'ನಂಗೆ ಇಬ್ಬೊರ್ ಆದರ್ಶರ್. ಒಬ್ಬ, ಜೀವ ಕೊಟ್ಟ ಜೀಸಸ್ ಕ್ರೈಸ್ಟ್; ಇನ್ನೊಬ್ಬ ಜೀವನಲಿ ಬೊದ್ಕುನ ಕಲೆನ ಕಲ್ಸಿಕೊಟ್ಟ ಮಹಾತ್ಮ ಗಾಂಧಿ'.

---

**ಮಾವಜಿ ರಾಮಣ್ಣ ಅಚ್ಯುತ**
# 606, 7ನೇ ಮೈನ್, 3ನೇ ಬ್ಲಾಕ್
ಬೆಂಗಳೂರು – 560 079
ಮೊಬೈಲ್ : 9845553206




# ಆಟಿ ತಿಂಗದ ಮಹಿಮೆ



**ಎಂ.ವಿ. ಮೋಹನ್ ಕುಮಾರ್**

ಕೊಡಗ್‌ಲಿ ಕಕ್ಕಡ ತಿಂಗ ಬಂದಂಗೆ ಸಾಧಾರಣ ಯಾವುದೇ ಆಡಂಬರ ಮಾಡುದ್ಲೆ. ಅದರಲಿ ಕೊಡಗ್‌ನ ಗೌಡುಗ, ಕೊಡಗ್ ಆಟಿ ತಿಂಗನ ಶೂನ್ಯ ತಿಂಗತ ಹೇಳಿ ಈ ತಿಂಗಲಿ ಯಾವ ಶುಭಕಾರ್ಯನ ಮಾಡುದ್ಲೆ. ಕಕ್ಡ ತಿಂಗಲಿ ಕೊಡಗ್‌ನ ಗೌಡರ್, ಕೊಡಗರ್ (ಮೂಲನಿವಾಸಿ) ಭತ್ತದ ಗದ್ದೆಲಿ ಕೆಲ್ಸ ಮಾಡಿಕೆ ದಿನದ ಹೆಚ್ಚು ಸಮಯನ ಉಪಯೋಗಿಸುದೆ. ಸಾಧಾರಣ ಈ ತಿಂಗಲಿ ಗದ್ದೆ ನಾಟಿ ಮಾಡುವದರಿಂದ ಗದ್ದೆನ ಹೂಡಿ ಹದ ಮಾಡುವೆ. ಏರಿನ ಕಡ್ದು ಒಳಾಂಡ ಎಳ್ದವೆ. ಹಂಗೆ ನೀರ್ ಗದ್ದೆಂದ ಇಂಗಿ ಹೋಗದಂಗೆ ಹೊಗಳಿಗೆ ಮೊಣ್ಣು ಹಾಕಿ ಮುಚ್ಚುವೆ. ಕೊಡಗ್‌ನ ಎಲ್ಲಾ ಮನೆಯವು (ಕುಟುಂಬಸ್ಥರ್) ಆಟಿ ತಿಂಗಲಿ ಹೊತಾರೆ 6 ಗಂಟೆಂದ ಕತ್ತಲೆ 6 ಗಂಟೆ ಮುಟ್ಟ ಗಂಡ್–ಹೆಣ್ಣ್ ತೇಳ್ವ ಭೇಧ–ಭಾವ

ಇಲ್ಲದೆ ಒಗ್ಗಟ್‌ಂದ ಗದ್ದೆಲಿ ದುಡ್ದವೆ.

ಆಟಿ ತಿಂಗಲಿ ಆಟಿ 18ರಂದ್ ವಿಶೇಷ ದಿನ ಉಟ್ಟು. ಆ ದಿನಲಿ ಕೊಡಗ್‌ನ ಎಲ್ಲಾ ಜನಾಂಗವು ಮೊದ್ದ್ ಸೊಪ್ಪು (ಆಟಿಸೊಪ್ಪು)ತೇಳ್ವ ಸೊಪ್ಪುನ ತಂದ್ ಅದರ ಬೇಸಿ ಅದರ ನೀರ್‌ನ ಪಾಯಸ, ಹಲ್ವ, ಇಡ್ಲಿ ಹಿಂಗೆ ಬೇರೆ ಬೇರೆ ತರದ ಸಿಹಿ ತಿಂಡಿನ ಮಾಡಿ ತಿಂದವೆ. ಆ ದಿನ ಎಲ್ಲವುಕೆ ಊಟ ಕೊಟ್ಟವೆ. ಆ ದಿನಲಿ ಆ ಸೊಪ್ಪುಲಿ 18 ತರದ ಮೊದ್ದ್‌ನ ಗುಣ (ಔಷಧಿ) ಇದ್ದದೆ ತೇಳ್ದ್ ಹಿರಿಯವರ ನಂಬಿಕೆ ಆಗುಟು. ಸಾಧಾರಣ ಎಲ್ಲಾ ವಯಸ್ಸಿನವು ಮತ್ತೆ ಹುಷಾರಿಲ್ಲದವು ಸ ತಿಂದವೆ. ಹಂಗೆ ಈ ತಿಂಗಲಿ ಮರಕೆಸ ತೇಳ್ವ ಸೊಪ್ಪುಂದ ಪತ್ರೊಡೆನ ಸಹ ಮಾಡುವೆ. ಇದೂ ಅಲ್ಲದೆ ಅಳುಂಬೆ, ಏಸಂಡ್, ಕಣಿಲೆನ ಸ ಈ ತಿಂಗಲಿ ತಿಂದವೆ. ಇನ್ನೊಂದು ವಿಶೇಷ ತೇಳ್ರೆ ಆಟಿ ತಿಂಗ 18ರಂದ್ ಆಟಿ ಕೋಳಿ (ನಾಟಿಕೋಳಿ)ನ ಗೈಪು ಮಾಡಿ ಬೇರೆ ಬೇರೆ ತಿಂಡಿನ ಮಾಡಿ ತಿಂದವೆ. ಇದಕ್ಕೆ ಕಾರಣ ತೇಳ್ರೆ ಈ ತಿಂಗಲಿ ಎಲ್ಲವೂ ಹೆಚ್ಚಾಗಿ ಶೀತ ಪ್ರದೇಶಲಿ ಕೆಲ್ಸ ಮಾಡುದರಿಂದ ಮೈಲೀ ಇರ್ವ ಶೀತನ ತೆಗ್ದ್ ಮೈನ ಬೆಚ್ಚಂಗೆ ಮಾಡಿಕೆ ಇಂಥ ಗೈಪುನ ಮಾಡಿ ತಿಂದವೆ, ತೇಳಿ ನಮ್ಮ ಹಿರಿಯವು ಹೇಳ್ತಾ ಇದ್ದವೆ.

ಈ ತಿಂಗಲಿ ಗಂಡಸರ್ ತಲೆಕೂದಲು ತೆಗೆಯೊದುಲ್ಲೆ. ಏಕೆ ತೇಳ್ರೆ ಅದ್ಕೆ ಕಾರಣ ಗದ್ದೆಲಿ ಕೆಲ್ಸ ಮಾಡ್‌ಕಾಕನ ಎಲ್ಲವೂ ಮಳೆ ಗಾಳಿ ಚಳಿನ ತೆಡಿಯಕೆ ಗೊರಗನ ತಲೆಲಿ ಇಸಿಕಂಡ್ ಕೆಲ್ಸ ಮಾಡ್ತ ಇದ್ದೊ. ಇದರ ಭಾರನ ತಡೆಯಕೆ ತಲೆಕೂದ್ಲು ಇದ್ದರೆ ಒಳ್ಳೆದ್ ಮತ್ತೆ ತಲೆನ ಬೆಚ್ಚಗೆಯಾಗಿದ್ದರೆ ಒಳ್ಳೆದಾದೆ ತೇಳಿ ಹಿರಿಯವು ಹೇಳ್ತಾ ಇದ್ದೊ. ಈ ಗೊರಗ ತೇಳ್ದು ಮಲೆನಾಡ್ ಕಡೆ ಮಾತ್ರ ಉಪಯೋಗಿಸುವೆ ತೇಳ್ರೆ ಈ ಮಡಿಕೇರಿ ತಾಲೋಕು ಸುತ್ತಮುತ್ತ ಮಾತ್ರ ಇದರ ಕಂಡೊಳೆ ನಾನ್.

ಮಳೆಯ ಅರ್ಭಟನ ಕಮ್ಮಿ ಮಾಡಿಕೆ ಆಟಿ ತಿಂಗ 18ರಂದ್ ಸಮುದ್ರಕ್ಕೆ ಹಾಲ್‌ನ ಹಾಕಿ ಪೂಜೆ ಮಾಡುವೆ. ಇದರ್‌ಂದ ಮಳೆ ಕಮ್ಮಿ ಆಗಿ ನಾಟಿ ಕೆಲ್ಸಕ್ಕೆ ಅನುಕೂಲ ಆದೇತ ಹಿರಿಯವು ಹೇಳ್‌ವೆ. ಕೊಡಗ್‌ಲಿ ಭತ್ತದ ಗದ್ದೆಲಿ ಮಳೆನ ನಂಬಿ ಮಾಡ್ವ ಪದ್ಧತಿ ಈಗಲೂ ಉಟ್ಟು. ಅದರಂಗೆ ಮಳೆಗ ಸರಿಯಾದ ಸಮಯಕ್ಕೆ ಬಂದರೆ ಭತ್ತದ ನಾಟಿ ಕೆಲ್ಸನ ಮಾಡಿಕೆ ರೈತರಿಗೆ ಒಳ್ಳೆದೆ ಆಗ್‌ತಿತ್ತ್. ಇದೆಲ್ಲಾ ನಾವು ಹೇಳ್‌ದಂಗೆ ಒಂದೂ ಆದುಲೆ.

ಎಲ್ಲಾ ದೇವ್ರ ಕೈಯಲ್ಲಿ ಉಟ್ಟು. ಭತ್ತದ ಬೆಳೆನ ಒಳ್ಳೆದೆ ಮಾಡ್‌ದು, ಹಾಳು ಮಾಡುದು ದೇವ್ರೆ. ಆ ದೇವ್ರ ಮುಂದೆ ಯಾರ ಆಟ ನಡಿಯಲೆ. ಇದ್ ಎಲ್ಲವುಕು ಗೊತ್ತಿರುವ ಸಂಗತಿ.

ಆದ್ರೆ ಈಗ ಎರಡ್ ವರ್ಷಲಿ ಹವಾಮಾನ ವಾತಾವರಣದ ಏರುಪೇರುಂದಾಗಿ ಸಕಾಲಕ್ಕೆ ಮಳೆ ಬಾರದೆ ರೈತರ್ ಆಕಾಶನ ನೋಡುವಂಗೆ ಆಗಿತ್ತ್.

ಕೊಡಗ್‌ಲಿ ಹೊಸದಾಗಿ ಮದ್ವೆ ಆಗಿ ಹೋದ ಹೆಣ್ಣ್‌ಮಕ್ಕಳಿಗೆ ಈ ಆಟಿ ತಿಂಗಲಿ ಆಟಿ ಕೂರುವ ಪದ್ಧತಿ ಅವರ ತೌರುಮನೆಲಿ ಉಟ್ಟು. ಇದೊಂದು ಸಂಪ್ರದಾಯ ಮೊದ್ವೆ ಆದ ಹೊಸದರಲಿ ಮಾತ್ರ ಅಷ್ಟೆ.

---

**ಎಂ.ವಿ. ಮೋಹನ್ ಕುಮಾರ್**
ಭದ್ರಗೊಳ ಗ್ರಾಮ ಮತ್ತು ಅಂಚೆ
ತಾರಿಕಟ್ಟೆ, ತಿತಿಮತಿ, ದ. ಕೊಡಗು
ಮೊಬೈಲ್ : 9945017881



# ಹೆಣ್ಣ್ ಗಂಡ್ ಪಯ್ಸಿ ಕೊಡುವ
# ಪದಿಷ್ಟ



**ಕಾಳಿಯಂಡ ತಂಗಮ್ಮ ಅಪ್ಪಚ್ಚ**

ಸಭಿಕರ್ ನಾನ್ ಹೇಳ್‌ದಂತ ಮಾತ್‌ಗಳ್ನ ಕೇಳಿಕಂಡ್ ತಪ್ಪುಗಳಿದ್ದರೆ ಕ್ಷಮಿಸಿರಣಿ ಇಲ್ಲಿ ಬಂದ್ ಸೇರ್‌ದಂತ ಬಂದ್ ಬಾಂಧವರಿಗೆ ನಮಸ್ಕಾರ. ಆದರೆ ದೊಡ್ಡಮನೆ ಮುಂದೆ ಅಂಗಳಲ್ಲಿ ಸೀತಾವಳಿ ಚಪ್ಪರ ಹಾಕೊಳ ಹಾಕಿದಂತ ಚಪ್ಪರದಡಿಲಿ ದಿಬ್ಬಣದ ಮುಖ್ಯಸ್ತರ್ ಸಾಲ್‌ಕಟ್ಟಿ ನಿಂತಳೊ. ನಿಂತವರ ಪೈಕಿ ಹೈದನ ಕಡೆಯಿಂದ ಬಂದ ದಿಬ್ಬಣದ ಮುಖ್ಯಸ್ತರ್ ಯಾರ್ ಆಗಿರುದ್ದು. ನಾನಯ್ಯ! ನಾ ಹೆಳ್‌ರೆ ನಿಮ್ಮ ನಾಡಿನ ಹೆಸರೆನ್ ನಿಮ್ಮ ಗ್ರಾಮದ ಹೆಸರೇನ್. ಮತ್ತೆ ನಿಮ್ಮ ಹೆಸರೇನ್ ಹೇಳಿ. ಆದರೆ ನಮ್ಮ ಗೂಡೆ ಹಾಲ್ ಅನ್ನ ಊಟ ಮಾಡಿಕಂಡ್ ಇತ್ತ್. ಉಯ್ಯಾಲೆ ಆಡುವ ಮಂಚದ ಮೇಲೆ ಮಲಗಿಕಂಡ್ ಕಷ್ಟ ಸುಖಗಳ್ನ ಗೊತ್ತಿಲ್ಲದವಳು ಸುಕಲಿ ಬದಕಿದವಳು. ಜನಕ ರಾಯನ ಮನೆಲಿ ಸೀತಾ ದೇವಿ ಹೆಂಗೆ ಇತ್ತೊ ಹಂಗೆ ಇರ್ತಿತ್ತ್. ದಶರಥನ ಮಜ ರಾಮಚಂದ್ರಗೆ ಮದುವೆ ಮಾಡಿ ಕೊಟ್ಟವೆಂತ. ಕಾಗದ ಮಾಡಿಸಿ ನೆಂಟರ್‌ಗಳಿಗೆ ಊರ್‌ವಕೆ ಕಾಗದ ಕೊಟ್ಟ್‌ನೆರೆ ಮನೆವಕು ವಿಳ್ಯಕೊಟ್ಟ್ ಹೇಳ್‌ವೆ. ಹೈದನ ಮನೆಂದ ಗೂಡೆನ ಮನೆಗೆ ದಿಬ್ಬಣ ಆಡಿ ಬಂದವೆ ದಿಬ್ಬಣ ಬಂದಕೆ ಗೂಡೆನ ಮನೆವು ಹೈದಂಗೆ ಧಾರೆ ಮಾಡಿ ಎರಡ್ ಕೈಗಳಿಗೆ ನಾಲ್ಕ್ ಕೈಗಳಾಗಿ ಮಾಡಿಕೊಟ್ಟವೆ. ಕೊಟ್ಟ ಮೇಲೆ ದೇವರ ಕೃಪೆಯಿಂದ ತಂದೆ ತಾಯಿಯ ಆಶ್ರೀರ್ವಾದಿಂದ ಲಾಯ್ಕ ಬದುಕು ಬಾಳಲಿಂತ ಹೇಳ್ತವೆ. ಆದರೆ ಗೂಡೆಗಳಿಗೆ ಅಪ್ಪ ಅವ್ವನ ಮನೆಲಿ ಬದ್‌ಕಿ ಬಂದಂತ ನಮ್ಮ ಗೂಡೆನ

ಸಮದಾನ ಪಡೆಸುದು ಯಾರು. ದಿಬ್ಬಣದ ಮುಖ್ಯಸ್ತ ॥ ನಾವಯ್ಯ ॥ ಕಡೆ ಬಾಯಿ ಹಲ್ಲ್ ಬಾತ್‌ಲ್ಲೆ ನೆತ್ತಿ ಎಣ್ಣೆ ಆರ್‌ತ್ಲೆ ಅಂಗೈ ಗೆರೆ ಮಾಸಿತ್ತಿಲೆ ಬುದ್ಧಿಶಕ್ತಿ ಬಾತ್‌ಲ್ಲೆ ಹಿಂಗೆ ಇರ್‌ಕನ. ಬುದ್ಧಿಮಾತ್ ಹೇಳಿ ಕೊಡ್ದು ಯಾರ್. ನಮ್ಮ ಮುದ್ದುಗೂಡೆಗೆ ಮಾಂವನ ಗುಣನ ಗೊತ್ತಿಲದವಳು ಅತ್ತೆನ ಯಾವ ಕೆಲಸ ಗೊತ್ತಿಲದವಳು. ಹಿಂಗೆ ಇರ್‌ಕ್ಕನ ಮಾತಾಡ್‌ಕನ ಜಗಳ ಬಂದದೆ ಇದರ ಸಮದಾನ ಮಾಡವು ಯಾರ್ । ದಿಬ್ಬಣದ ಮುಖ್ಯಸ್ತ । ನಮ್ಮ ಮುದ್ದು ಗೂಡೆನ ನಿಮ್ಮ ಸ್ವಾದೀನಕೆ ಕೊಟ್ಟವೆ ಹಂಗೆ ಒಪ್ಪ್‌ಸಿ ಕೊಡ್‌ಕ್ಕನ. ನಮ್ಮ ಮುದ್ದ್‌ಗೂಡೆಗೆ ಹನ್ನೆರಡ್ ಪವನ್ ಚಿನ್ನ ಉಡಿಕೆ ಸೀರೆ ಊಟಮಾಡಿಕೆ ಬಟ್ಲ್ ಕೈತೊಳೆಕೆ ಚೆಂಬು ಹಾಲ್ ಕರೆಕೆ ಹಸ್‌ನ ಮಲಗಿಕೆ ಮಂಚನ ಉಗಿಯಕೆ ಕೊಳಂಬೆನ ಸ್ವಲ್ಪ ಹಣನ ಹಿಂಗೆ ಕೊಟ್ಟ ಸ್ವಲ್ಪ ಐಶ್ವರ್ಯನ ಬಡ್ಡಿಗೆ ಕೊಟ್ಟ್ ಒಂದಕೆ ಹತ್ತ್ ಹತ್ತಕೆ ನೂರ್ ನೂರಕೆ ಸಾವಿರಗಟ್ಟೆಲಿ ಮಾಡಿ ಕೀರ್ತಿಗಳ್ಸುದು ಯಾರ್. ॥ ದಿಬ್ಬಣದ ಮುಖ್ಯಸ್ತ ॥ ಚಂದ್ರಹಾಸ ವೆಂಬಹೈದಂಗೆ ಪದ್ಮಾವತಿ ವೆಂಬಗೂಡೆ ಸೊಮರೆಸ ಹೈದಂಗೆ ಮನುದೇವಿ ಗೂಡೆ ಪಶಿಷ್ಟರಿಗೆ ಲೋಪ ಮುದ್ರ ದೇವಿ ಗೂಡೆ ಹಂಗೆ ಹನುಮಂತನಿಗೆ ತಂಗಾಳಿ ಬೀಸಿದಂಗೆ. ದಂಪತ್ತಿಗಳು ಇಬ್ಬರು ಜೋಡಿ ಆದರೆ ಪುತ್ರ ಪುತ್ರ ಕಾಲಂತ್ರ ಅಭಿವೃದ್ಧಿಯಾಗಿ ಕೀರ್ತಿವಂತರಾಗಿ ಬದಕಿ ಬಾಳಲಿಂತ ಹೇಳಿ ದೇವರ ಪ್ರಾರ್ಥಿಸುವೆ. ಆದರೆ ಶ್ರೀರಾಮ ದೇವರು ಹೆಂಗೆ ಸೀತೆ ದೇವಿನ ಕರ್‌ಕಂಡ್ ಹೋಗುತ್ತಿದ್ದನೊ. ಹಂಗೆ ನೀವು ಕರಕಂಡ್ ಹೋಗುತ್ತಿದ್ದರ್ಲ್ಲ. ಹತ್ತ್ ಕುಟುಂಬ ಹದಿನೆಂಟು ಗೋತ್ರ ದೇವಾಸಭೆ ಸಂಸಾರ ಜತೇಲಿ ಕೇಳಿ ನಮ್ಮ ಮನೆಯ ಯಜಮಾನರ ಜತೇಲಿ ಕೇಳಿ ದಿಬ್ಬಣದ ಮುಖ್ಯಸ್ತರಿಗೆ ಹೆಣ್ಣ್ ಗಂಡ್‌ನ ಕೈಹಿಡ್ದ್ ವಹಿಸಿ ಕೊಟ್ಟವೆ. ಅಲ್ಲಿ ಸೇರ್ದ ಜನಂಗ ಒಳ್ಳೆ ಕಾರ್ಯವಂತವೆ ಹಂಎ ಹೇಳ್‌ವೆ. ಹತ್ತ್ ಕುಟುಂಬ ಹದಿನೆಂಟು ಗೊತ್ರ ದೇವಾಸಭೆ ಸಂಸಾರ ಜತೇಲಿ ಕೇಳಿ ನಮ್ಮ ಮನೆಯ ಯಜಮಾನರ ಜತೇಲಿ ಕೇಳಿ ದಿಬ್ಬಣದ ಮುಖ್ಯಸ್ತರಿಗೆ ಹೆಣ್ಣ್ ಗಂಡ್‌ನ ಕೈಹಿಡ್ದ್ ವಹಿಸಿ ಕೊಟ್ಟದೆ. ಅಲ್ಲಿ ಹೆರ್ದ ಜನಂಗ ಒಳ್ಳೆ ಕಾರ‍್ಯವಂತವೆ ಹೇಳ್‌ವೆ. ಹತ್ತ್ ಕುಟುಂಬ ಹದಿನೆಂಟ್ ಗೊತ್ರ ದೇವಸಭೆ ಸಂಸಾರ ಸಂಗಡ ಕೇಳಿ ಹಂಗೆ ಮೂರು ಸಲ ಹೇಳಿ ಹೈದನ ಗೂಡೆನ ಕೈಹಿಡ್ದ್ ಮುಖ್ಯಸ್ತಕೆ ಕೊಡರು. ಹರಿಜನಂಗ ಓಲಗ ಊದಿಕಂಡ್ ಹೈದನ ಗೂಡೆನ ಕರ್‌ಕಂಡ್ ಹೋದವೆ.

---

**ಕಾಳಿಯಂಡ ತಂಗಮ್ಮ ಅಪ್ಪಚ್ಚ**
ಬಿಳಿಗೇರಿ, ಮಡಿಕೇರಿ
ಮೊಬೈಲ್ : 9483008653




# ಅಂದ್-ಇಂದ್



ಕಟ್ರತನ ಲಲಿತಾ ಅಯ್ಯಣ್ಣ

"ಪೋಸ್ಟ್ ಆಫೀಸಿಗೆ ಹೋಗಿದ್ದಾ, ಕಾಗದ ಏನಾರಾ ಉಟ್ಟಾ ಕೇಳ್ದಾ" ಅಪ್ಪ ಮಂಜನ ಕೇಳ್ದೊ.

"ಇಲ್ಲೆ ಅಪ್ಪ ಯಾವ್ದೂ ಇಲ್ಲೆತೇಳ್ದೊ ಪೋಸ್ಟ್‌ಮಾಸ್ಟರ್"

"ಮಕ್ಕಳ ಕಾಗದ ಬರದೆ ಹದಿನೈದ್ ದಿನ ಆತ್. ವಾರಕ್ಕೊಮ್ಮೆ ಕಾಗದ ಬರಿತ್ತಿದ್ದೊ ಏನಾತೋ ಏನೋ"

ಇದ್ ಅಂದ್‌ನ ಮಾತ್. ಎಲ್ಲಾ ಕಾಗದಲೇ ನಡಿತ್ತಿದ್ದ ಕಾಲ. "ತೀರ್ಥರೂಪ ಅಪ್ಪ, ಅಮ್ಮಂಗೆ...." ತೇಳಿ ಶುರು ಆಗ್‌ತಿದ್ದ ಕಾಗದಗಳ್ಲಿ ಮನೆಯವರ, ದನಕರ್, ಆಸ್ತಿಪಾಸ್ತಿ ಎಲ್ಲದರ ಕ್ಷೇಮ ಸಮಾಚಾರ ತುಂಬಿರ್‌ತಿದ್ದೊ. ಇನ್‌ಲ್ಯಾಂಡ್ ಶೀಟ್‌ನ ಎರಡೂ ಕಡೆ ತುಂಬಾ ವಿಷಯಗಳೆ. ಜಾಗ ಸಾಲಿಕಿಲೆತ ಸಣ್ಣ ಅಕ್ಷರಲಿ ಬರಿತಿದ್ದೊ. ಒಂದು ವಾರ ಇತ್ತಂದ ಕಾಗದ ಹೋದರೆ ಇನ್ನೊಂದ್ ವಾರ ಕಳ್ದ್ ಅತ್ತಂದ



ಕಾಗದ ಬಾತಿತ್ತ್.

ವಾರಕ್ಕೆ ಎರಡ್ ದಪ ಪೋಸ್ಟ್ ಆಫೀಸಿಗೆ ಹೋಗಿ ಕಾಗದ ಹಂಗೆ ಖಾಲಿ ಇನ್‌ಲ್ಯಾಂಡ್ ಶೀಟ್ ತಾತಿದ್ದೊ. ಒಂದೊಂದ್ ದಿನ ಸುಮಾರ್ ಕಾಗದ ಬಾತಿದ್ದೊ. ಚಾಂಪನ ಮನೆಂದ, ಮಾವಂದರ್, ಅತ್ತೆಕ, ಅಕ್ಕತಂಗೆಕ, ಅಣ್ಣ–ತಮ್ಮಂದ್‌ರ್ ಹಿಂಗೆ ಎಲ್ಲಾರ ಸಮಾಚಾರ ಕಾಗದಲೇ ಬಾತಿದ್ದೊ. ಮಕ್ಕಳ ಸ್ಕೂಲಿಗೆ ಇರ್ಕನ ಮಾತ್ರ ನೆಂಟರ ಮನೆಗೆ ಹೋದು ರೂಢಿ ಇತ್ತ್.

ಒಂದ್ ಕಾಗದ ಬಂದರೆ ಮನೆಯವು ಎಲ್ಲಾ ಬಾಡೆಲಿ ಒಟ್ಟಿಗೆ ಸೇರ್‌ತಿದ್ದೊ. ಎಲ್ಲವೂ ಕಾಗದಲಿ ಎಂತ ಉಟ್ಟು ತೇಳ್ಕನ ಕೇಳ್ವ ಆತುರ. ಮಂಜನೊ, ಪಿಳ್ಳಿನೋ ಕಾಗದ ಓದಿ ಹೇಳ್ತಿದ್ದೊ. ಅರ್ಜೆಂಟ್ ವಿಷ್ಯ, ಸಾವು ಸುದ್ದಿ ಇದ್ದರೆ ಮಾತ್ರ ಟೆಲಿಗ್ರಾಂ ಬಾತಿತ್ತ್. ಟೆಲಿಗ್ರಾಂ ತೇಳ್ದರೇ ಎಲ್ಲವ್ಕೂ ಹೆದ್ರಿಕೆ. ಯಾರಿಗೋ ಏನೋ ಆತ್ ಕಂಡದೆ. ಟೆಲಿಗ್ರಾಂನ ಪೋಸ್ಟ್‌ಮ್ಯಾನ್ ಮನೆಗೇ ತಾತಿತ್ತ್. ಎಲ್ಲರ ಎದೆ ಹೊಡ್ಕಣ್ ತಿತ್ತ್. ಶುರು ಶುರುಲಿ ಮನೆಲಿ ಯಾರಾರ ಸತ್ತ್ ಹೋದರೆ ಸಾವ್ ಸುದ್ದಿ ತಿಳ್ಸಿಕೆ ಒಂದೊಂದ್ ಕಡೆ ಒಬ್ಬೊಬ್ಬ ಹೊರ್‌ಡ್ತಿದ್ದೊ. ಮತ್ತೆ ಟೆಲಿಗ್ರಾಂ ಬಾತಿತ್ತ್.

ಆಗೆಲ್ಲಾ ಎಲ್ಲರ ಮನೆಲಿ ಗಡಿಯಾರ ಇತ್ತ್‌ಲೆ. ಹಿರಿಯವು ಸೂರ್ಯನ ಚಲನೆನ ನೋಡಿ ಇಷ್ಟೇ ಗಂಟೆತ ಸರಿಯಾಗಿ ಹೇಳ್ತಿದ್ದೊ. ಹೊತ್ತ್ ಮುಳ್ಗ್‌ಕನ ದನ ಕೂಡ್ಸುದು, ಹಂದಿಗೆ ಹೊಯ್ಯೆದ್, ಕೋಳಿಗಳ್ನ ಗೂಡಿಗೆ ಸೇರ್ದುದು ಎಲ್ಲಾ ನಡಿಯತಿತ್ತ್.

ಸಾಯಂಕಾಲ ಆದಂಗೆ ಮಕ್ಕ ಎಲ್ಲಾ ಸ್ನಾನ ಮಾಡಿ ದೇವ್ರಿಗೆ ದೀಪ ಇಸ್‌ಕನ ಬರಿದ್ ಸಾಲಾಗಿ ನಿತ್ತ್. "ಸ್ವಾಮಿ ದೇವನೆ, ಲೋಕಪಾಲನೆ..." ಭಜನೆ ಮಾಡ್ತಿದ್ದೊ. ಮತ್ತೆ ಬದುದು, ಬರಿಯದು. ಸಾಯಂಕಾಲ ಆರು ಗಂಟೆಗೆಲ್ಲಾ ಅಡುಗೆ ಶುರು ಆಗ್ತಿತ್ತ್. ರಾತ್ರಿ ಏಳುವರೆಗೆಲ್ಲಾ ಊಟ ಮಾಡಿ ಮಲ್ಗ್‌ತಿದ್ದೊ.

ಹಗಲಿಡೀ ದುಡ್ದ ಶರೀರ ಹಾಸಿಗೆ ಸೇರ್ತಿದಂಗೆ ನಿದ್ದೆ ಹೋಗ್ತಿತ್ತ್. ಆಗ ಗದ್ದೆ ತೋಟದ ಕೆಲ್ಸಗ ಎಲ್ಲಾ ಅವವೇ ಮಾಡ್ತಿದ್ದೊ. ನಾಟಿ–ಅಗೆ–ಒಕ್ಕ್‌ಲ್ ಕೆಲ್ಸಗಳಿಗೆ ಮಾತ್ರ ಎಲ್ಲಾ ಮನೆವು ಆಳಿಗೆ ಆಳ್ ಲೆಕ್ಕಲಿ ಕೂಡಿ ಕೆಲ್ಸ ಮಾಡ್ತಿದ್ದೊ. ಕೂಲಿ ಕೊಡ್ವ ಕೆಲ್ಸ ಇತ್ತ್‌ಲೆ. ಗದ್ದೆಂದ ಬಂದಂಗೆ ಹಲ್‌ಸ್‌ನ ಹಣ್ಣ್ ತಿಂದ್, ಎರಡ್ ಪೆಗ್ ಏರ್ಸಿ, ಕಡ್‌ಂಬಿಟ್ಟು ಕೋಳಿಸಾರ್, ಅನ್ನ ಹರಿದಿಗೈಪು ಹೊಟ್ಟೆ ತುಂಬಾ ಗಡದ್ ಊಟ.

ಬೆಳಿಗ್ಗೆನ ದಿನಚರಿ ಐದ್ ಗಂಟೆಗೆ ಶುರು ಆತಿತ್ತ್. ಎದ್ದ್ ಬೆಲ್ಲದ ಕರಿ ಕಾಫಿ ಕುಡ್ದ್ ಹೆಣ್ಮಕ್ಕ ಪಾತ್ರೆ ಬೆಳ್ಗುದು, ಕಂತರೆಂದ ನೀರ್ ಸೇರಿ ಅಡುಗೆ ಮನೆ ಹಂಗೆ ಗುಡ್ಡ (ಬಾತ್ ರೂಂ)ದ ಹಂಡೆಗೆ ನೀರ್ ತುಂಬ್ಸಿ, ಅಮ್ಮ ಮಾಡ್ದ ರೊಟ್ಟಿ ತಿಂದ್, ತೋಟಂದ ಬಾಳೆಲೆ ಕೊಯ್ದ್ ತಂದ್ ಒಲೆ ಬಾಡ್ಸಿ ಮಧ್ಯಾಹ್ನಕ್ಕೆ ಬುತ್ತಿ ಕಟ್ಟಿಕಂಡ್ ಸ್ಕೂಲ್‌ಗೆ ಹೋದು ಮಕ್ಕಳ ಕೆಲ್ಸ.

ಸ್ಕೂಲ್‌ಂದ ಬಾಕನ ಅಮ್ಮ ಕೆಂಡದಿಟ್ಟ್, ಚೆಟ್ಟಿ ಹಿಟ್ಟ್, ಕೂಗಲೆ ಹಿಟ್ಟ್, ಕಜ್ಜಾಯ ಹಿಂಗೆ ಏನಾರ ತಿಂಡಿ ಮಾಡಿ ಇಸ್‌ತಿದ್ದೊ.

ಮಕ್ಕ ಸ್ಕೂಲ್‌ಗೆ ಹೋದ ಮ್ಯಾಲೆ ಅಪ್ಪ ರೊಟ್ಟಿ ತಿಂದ್ ಗದ್ದೆ, ತೋಟದ ಕಡೆ ಹೊರ್ಡ್ ತಿದ್ದೊ. ಎದ್ದಂಗೆ ಗದ್ದೆಗೆ ಹೋಗಿ ದನ ಕರ್‌ಗಳಿಗೆ ಹುಲ್ಲ್ ಕೊಯ್ದ್ ಬಂದಿದ್ದವೆ. ಅಮ್ಮ ಹಟ್ಟಿಗೆ ಹೋಗಿ ಹಾಲ್ ಕರ್ದ್, ಮಜ್ಜಿಗೆ ಕಡ್ದ್ ಆಗಿದ್ದದೆ. ಮಕ್ಕ ರೊಟ್ಟಿ ತಿಂಬಕನ ಬೆಣ್ಣೆ ಮುದ್ದೆ ಎಲ್ಲವ್ಕೂ ಹಾಕ್ ತಿದ್ದೆ. ಮನೆಲಿ ಬೆಳ್ದ ತರಕಾರಿ ಗೈಪು ಆಂಬರ, ಅದ್ಕೆ ಬೆಣ್ಣೆ ಮುದ್ದೆ. ಆಹಾ... ಅದರ ರುಚಿನೇ ಬ್ಯಾರೆ! ಯಾವುದೇ ಬೇಕರಿ ತಿಂಡಿ ಇಲ್ಲದೆ ತೋಟಲಿ ಬೆಳ್ದ ತರಾವರಿ ಹಣ್ಣ್‌ಗ. ಮಕ್ಕ ಶನಿವಾರ – ಐತ್ವಾರ ಬ್ಯಾಗ್ ಕೋಸಿಕಂಡ್ ಕೈಲಿ ಒಂದ್ ಕೊಕ್ಕೆ ಹಿಡ್ದ್ ಹಣ್ಣ್ ಬ್ಯಾಟೆಗೆ ಹೊರ್ಡ್‌ತಿದ್ದೊ. ಕರ್ಮಂಜಿ, ನೇರಳೆ, ಗೊಟ್ಟೆ ಇಡ್‌ಂಜಿ, ಅಮೆ, ಕೂಮೆ, ರಂಜಳ, ಪೇರಳೆ ಹಿಂಗೆ ಎಂತೆತೊ ಹಣ್ಣ್‌ಗ ಗ್ಯಾನ ಮಾಡ್ರೆ ಬಾಯಿಲಿ ನೀರ್ ಬಂದದೆ. ಈಗೆಲ್ಲಾ ಅಂತ ಹಣ್ಣ್‌ಗ ಕಾಂಬಕ್ಕೆ ಸಿಕ್ಕುದುಲೆ.

ಇನ್ನ್ ಊರ್‌ಲಿ ಹಂದಿ ಹೊಡ್ದರೆ ಮನೆಲಿ ಗೌಜಿ ಇರ್ತಿತ್ತ್. ಮನೆಲಿ ಬೇಕಾದಷ್ಟ್ ಕೋಳಿ ಸಾಕ್ತಿದ್ದೊ. ಯಾರಾರ್ ನೆಂಟರ್ ಬಂದರೆ ಕುತ್ತಿಗೆ ತಿರ್ಪಿ ಅಪ್ಪ ಅಚ್ಚ್‌ಕಟ್ಟ್ ಮಾಡಿ ಆಕನ ಅಮ್ಮನ ಮಸಾಲೆ ಕಡ್‌ಂಬಿಟ್ಟೊ, ನೂಪಿಟ್ಟೊ ತಯಾರ್ ಆತಿತ್ತ್. ಅಂಗಡಿಕೆ ಮಾಸಕ್ಕೆ ಹೋಗುವ ಕೆಲ್ಸ ಇತ್ತ್‌ಲೆ.

ಮಳೆಗಾಲಲಿ ಗದ್ದೆಗೆ, ತೋಡಿಗೆ ಮೀನ್ ಹತ್ತ್‌ಕನ ಬೇಕಾದಷ್ಟ್ ತಿಂದ್ ಒಣಗಿಸಿ ಇಟ್ಟ್‌ಕಣ್‌ತಿದ್ದೊ. ಗದ್ದೆ ಕೊಯ್ಲ್ ಆದಂಗೆ ಗದ್ದೆಲಿ ತರಕಾರಿ ಬೆಳ್ಸುವ ಕೆಲ್ಸ. ಒಂದ್ ವರ್ಷಕ್ಕೆ ಆಗುವಷ್ಟ್ ಬೆಳ್ಳರಿ, ಸ್ವಾಂತೆ, ಬೂದಿ ಕುಂಬಳ, ಕೆಂಬಡೆಕಾಯಿ, ಬೆಲ್ಲ ಗೆಣ್ಸ್, ಜೋಳ ಕೂಂಬೆ ಅಟ್ಟಲಿ ಜೋಡ್ಸಿ ಇಡ್ತಿದ್ದೊ. ಅಟ್ಟಲಿ ಒಂದ್ ಮೂಲೆಲಿ ಹಲಸಿನೆಕ್ಕಿನೂ ಇರ್ತಿತ್ತ್.

ಮನೆಲಿ ಬೆಳ್ದ ತರಕಾರಿನ ರುಚಿ ಕಂಪೆನಿ ಗೊಬ್ಬರ ಹಾಕಿ ಬೆಳ್ಸಿದ ಅಂಗಡಿ ತರಕಾರಿ ಇರ್ದುಲೆ. ಅದ್ರಂದೇನೋ ಅಂದ್‌ನವ್ಕೆ ಕಾಯ್ಲೆ ಕಸಾಲೆ

ಕಮ್ಮಿ ಇತ್ತ್. ಬಿ.ಪಿ., ಶುಗರ್ ಅವ್ಕೆ ಗೊತ್ತೇ ಇತ್ತ್‌ಲೆತ ಕಂಡದೆ ಟಿ.ವಿ., ಮೊಬೈಲ್ ಇಲ್ಲದ್ರಂದ ಸಾಯಂಕಾಲ ಹೊತ್ತು ಮನೆವು ಎಲ್ಲಾ ಬಾಡೆಲಿ ಸೇರಿ ಕಷ್ಟ–ಸುಖ ಮಾತಾಡ್ತಿದ್ದೊ. ತಮಾಷೆ, ಹರಟೆ ಎಲ್ಲಾ ನಡಿತಿತ್ತ್.

ಕುಟುಂಬಲಿ ಒಬ್ಬರ ಕಷ್ಟ ಸುಖಕ್ಕೆ ಹೋಗಿ ಎತ್ತ್‌ತಿದ್ದೊ. ಮದುವೆ ಬಂದರೆ ಅದ್ ಎಲ್ಲವ್ಕೂ ಸಂಭ್ರಮ. ಅಕ್ಕಿ ಮಾಡ್ದು, ಮೆಣ್ಸ್, ಸಂಬಾರ ಮತ್ತೆಲ್ಲಾ ಹೊಡಿಗಳ ಮಾಡ್ದು, ಚಪ್ಪರ ಹಾಕುದು, ಎಲ್ಲ ಕೆಲ್ಸಗಳ ಸೇರಿಕಂಡ್ ಮಾಡ್ತಿದ್ದೊ. ಮದ್ವೆ ದಿನದ ಊಟಕ್ಕೆ ಬಟ್ಲಿಟ್ಟ್ ಮಾಡಿಕೆ ಎಲ್ಲ ಮನೆಯವ್ಕೆ 5–10 ಸೇರ್ ಹಿಂಗೆ ಅಕ್ಕಿ ಕೊಡ್ತಿದ್ದೊ. ಎಲ್ಲವೂ ಬಟ್ಲಿಟ್ಟ್ ಮಾಡಿ ತಾತಿದ್ದೊ. ಮತ್ತೆ ಮತ್ತೆ ದಿನ ಕಳ್ದಂಗೆ ತುಪ್ಪದನ್ನ, ಪಲಾವ್ ಶುರು ಆಗಿ ಬಟ್ಲಿಟ್ಟ್ ಮೂಲೆ ಸೇರ್ತ್.

ಕೈಲ್‌ಪೊದು, ಹುತ್ತರಿ ಬಂದರೆ ಎಲ್ಲರ ಮನೆಲಿ ಮಾಡ್ದ ಅಡ್‌ಗೆನ ದೊಡ್ಡಮನೆಲಿ ತಂದ್ ಎಲ್ಲಾ ಸೇರಿ ಉಂಬತಿದ್ದೊ. ಆಗ ಆಗ್‌ತ್ತಿದ್ದ ಕುಸಿಗೆ ಬೆಲೆ ಕಟ್ಟಿಕೆ ಆದುಲೆ. ಎಲ್ಲಾ ಹೆಣ್ಮಕ್ಕ ಪೈಪೋಟಿಲಿ ರಸರಸ ಅಡ್‌ಗೆ ಮಾಡಿ ತಾತಿದ್ದೊ. ತಿಂಬವ್ಕೆ ಗೌಜಿ.

* * *

ತಾತನ ಕಾಲ ಕಳ್ದ್ ಅಪ್ಪನ ಕಾಲ ಬಾಕನ ಮಕ್ಕ ಸ್ಕೂಲ್‌ಗೆ ಹೋಗಿ ವಿದ್ಯೆ ಕಲ್ತ್ ಮ್ಯಾಲೆ ಕೂಡ್–ಕೂಟ್ ಕೆಲ್ಸ ನಿತ್ತೋತ್. ಅವ್ಕೆ ಮರ್ಯಾದೆ ಪ್ರಶ್ನೆ. ದುಡ್ಡ್ ಕೊಟ್ಟ್ ಕೂಲಿಗಳ್ನ ಕರ್ಕಂಡ್ ಕೆಲ್ಸ ಮಾಡಿಕೆ ಶುರು ಆತ್. ಸ್ವಲ್ಪ ಕಷ್ಟಲಿ ಇರವು ಅವರ ಕೆಲ್ಸ ಅವೇ ಮಾಡಿಕಂಬತಿದ್ದೊ.

ಸ್ಕೂಲ್‌ಂದ ಬಾಕನ ಬೇಕರಿನ ಬಿಸ್ಕೆಟ್, ಬ್ರೆಡ್, ಪಪ್ಸ್, ಸಮೋಸ ಎಂತಾರ್ ತಿಂಬಕೆ ಇತ್ತಿತ್ತ್. ಟೆಲಿಫೋನ್ ಬಾತ್, ಯಾರಿಗಾರ್ ಫೋನ್ ಮಾಡಕುತೇಕ್ರೆ ಪೋಸ್ಟ್ ಆಫೀಸಿಗೆ ಹೋಗಿ ಅಥವಾ ಇನ್ಯಾರ ಹತ್ರ ಹೋಗಿ ಟ್ರಂಕ್ ಕಾಲ್ ಬುಕ್ ಮಾಡ್ದು. ಲೈನ್ ಸಿಕ್ಕುವವರೆಗೆ ಕಾದ್‌ಕಂಡ್ ಕೂರಕಾಯ್ತ್. ಅರ್ಜೆಂಟ್ ಇದ್ದರೆ ಲೈಟ್ನಿಂಗ್ ಕಾಲ್. ಅದ್ಕೆ ದುಡ್ಡು ಜಾಸ್ತಿ. ಮತ್ತೆ ಮನೆಗೆ ಲ್ಯಾಂಡ್‌ಲೈನ್ ಫೋನ್ ಬಾತ್. ಕಡೆಲಿ ಟಿ.ವಿ. ಬಾತ್. ಶುರುಗೆ ಬ್ಲಾಕ್ ಅಂಡ್ ವೈಟ್ ಟಿ.ವಿ. ಅದ್ ಎಲ್ಲರ ಮನೆಲಿ ಇಲ್ಲೆ. ಇದ್ದವರ ಮನೆಗೆ ಹೋಗಿ ಕುದ್ದ್‌ಕಂಡ್ ನೋಡ್ತಿದ್ದೊ.

ಐತ್ವಾರ ರಾಮಾಯಣ ಮಹಾಭಾರತ ಧಾರಾವಾಹಿನ ಯಾರೂ ತಪ್ಪಿಸ್‌ತಿಲ್ಲೆ. ಆಗ ಯಾಗಾರ ಒಮ್ಮೆ ಕನ್ನಡ ಸಿನಿಮಾ ಏನಾರ ಬಂದರೆ ಬಾಳಾ ಕುಸಿ ಆಗ್ತಿತ್ತ್.

ದಿನ ಕಳ್ದಂಗೆ ಕಲರ್ ಟಿ.ವಿ. ಬಾತ್. ಕನ್ನಡ ಡಿ.ಡಿ. ಚಾನಲ್ ಹಾಗೆ ಬ್ಯಾರೆ ಚಾನಲ್‌ಗ ಶುರು ಆದೊ. ಗಂಡ್ಮಕ್ಕ ಹೆಣ್ಮಕ್ಕ ಸರಿ. ಸರಿ ಓದಿ ಚಾಕರಿಗೆ ಹೋಕೆ ಶುರು ಆತ್. ಸಮಾಜಗಳ್‌ಲಿ ಮದ್ವೆ ನಡಿಯಕೆ ಶುರು ಆತ್. ಮನೆಯವ್ರ ಸಹಕಾರ ಶಾಸ್ತ್ರಕ್ಕೆ–ಇಕ್ಕಿಕೆ ಸೇರ್ದು ಇಷ್ಟೇ ಆಗೋತು. ಹಿಂದೆನ ಪ್ರೀತಿ ಕಮ್ಮಿ ಆಗೋತ್. ಎಲ್ಲಾ ಪೈಪೋಟಿನ ಬದ್‌ಕ್ ಶುರು ಆತ್.

* * *

ಇಂದ್ ಮೊಬೈಲ್ ಬಂದುಟ್ಟು. ಅವರವರ ಅಂತಸ್ತಿಗೆ ತಕ್ಕಂಗೆ ತರಾವರಿ ಮಾಡಲ್‌ಗ. ದುಡ್ಡೊಂದು ಇದ್ದರೆ ಅಂಗೈಲೇ ಪ್ರಪಂಚನ ಕುದ್ದಲ್ಲೇ ನೋಡ್ವಂತ ಕಾಲ. ಟಿವಿ, ಕಂಪ್ಯೂಟರ್ ಇಲ್ಲದ ಮನೆನೇ ಇಲ್ಲೆ ಇವೆಲ್ಲಾ ಈಗ ಅಗತ್ಯ ವಸ್ತುಗಳಾಗಿ ಬಿಟ್ಟೊಳೊ.

ಹಿಟ್ಟ್‌ಗ, ತಿಂಡಿಗ ಸದ್ದ್ ಕಮ್ಮಿ ಮಾಡ್ದೊ. ಏನಿದ್ದರೂ ಫಿಜ್ಜಾ, ಬರ್ಗರ್, ಐಸ್‌ಕ್ರೀಂ, ಕಬಾಬ್, ಬಿರಿಯಾನಿನ ಜಮಾನ.

ಅಂದ್ ಬಟ್ಟೆ ಇಲ್ಲದವು ಹರ್‌ಕ್ಕಲ್‌ಬಟ್ಟೆ ಹಾಕ್‌ತಿದ್ದೊ. ಇಂದ್ ಹರ್ಕಲ್ ಬಟ್ಟೆನೇ ಫ್ಯಾಷನ್! ಮನೆಮನೆಲೂ ಕಾರ್, ಬೈಕ್, ನಡೆಯವನೇ ಇಲ್ಲೆ. ಅದ್ಕೆತ ಜಿಮ್, ವರ್ಕೌಟ್, ವಾಕಿಂಗ್ ಎಲ್ಲಾ.

ಹಿಂದೆ ಮಾರುದ್ದ ಲೆಕ್ಕನ ಬಾಯಿಲೇ ಪಟಾಫಟ್‌ತ ಕೂಡ್ಸ್ ತಿದ್ದೊ ಈಗ ಕ್ಯಾಲ್ಕುಲೇಟರ್, ಗೂಗಲ್, ಯೂಟ್ಯೂಬ್‌ಲೇ ಎಲ್ಲಾ.

ಹೆಣ್ಮಕ್ಕ ಅಡುಗೆ ಕಲಿಯಕುತ ಇಲ್ಲೆ. ಎಲ್ಲಾ ರೆಡಿ ಟು–ಈಟ್! ಮತ್ತೆ ಡಯಟಿಂಗ್. ಹಿಂದೆನವು ಹೊಟ್ಟೆ ತುಂಬಾ ತಿಂದ್ ಕೈ ತುಂಬಾ ಕೆಲ್ಸ ಮಾಡ್ತಿದ್ದೊ.

ಮಕ್ಕಳಿಗಂತೂ ಟಿವಿಲಿ ತೋರ್ಸುವ ಪ್ರತಿಯೊಂದು ತಿಂಡಿ ಬೇಕೇ ಬೇಕ್. ಹೆಣ್ಮಕ್ಕ ದಿನಕ್ಕೊಂದ್ ಸೋಪ್, ಶಾಂಪು, ಕ್ರೀಮ್ ತೋರ್ಸ್‌ಕನ ನಾವೂ ಅವರಂಗೆ ಆಕುತ ಕಂಪೆನಿಗಳ್ನ ಉದ್ದಾರ ಮಾಡ್ವೆ.

ಕಾಲ ಬದಲಾತ್ಲೆ, ನಾವು ಬದಲಾಗೊಳೊ ಅಷ್ಟೆ. ಆಗ ಶ್ರಮವಹಿಸಿ ಕೆಲ್ಸ ಮಾಡ್ತಿದ್ದೊ ಈಗ ಅದ್ನ ಕೆಲ್ಸದವ್ರ ಕೈಯಿಂದ ಮಾಡ್ಸಿ, ಶ್ರಮಪಡಿಕೆ ಜಿಮ್, ವರ್ಕೌಟ್ ಸೆಂಟ್, ಯೋಗ ಕ್ಲಾಸ್‌ಗೆ ಹೋದವೆ ಅಷ್ಟೆ.

---

**ಕಟ್ರತನ ಲಲಿತಾ ಅಯ್ಯಣ್ಣ**
ಮಡಿಕೇರಿ
7204675925

# ದೆಹಲಿಲಿ ಜರ್‌ಗಿದ
# ಫಿಟ್ಟ್ ಇಂಡಿಯ ಕ್ಯಾಂಪೇನ್‌ನ ಸವಿನೆನ್‌ಪು

●

**ಕಟ್ರತನ ಕೆ. ಬೆಳ್ಯಪ್ಪ**

ಕೊಡಗು ಜಿಲ್ಲೆ ಮಡಿಕೇರಿ ತಾಲೋಕು ಬಲಮುರಿ ಗ್ರಾಮದ ಕಟ್ರತನ ಕೆ. ಬೆಳ್ಳಪ್ಪನಾದ ನಾನ್ ಕೊಡಗಿನ ಹಿರಿಯ ನಾಗರಿಕರ ವೇದಿಕೆಲಿ 80 ವರ್ಷ ಪ್ರಾಯಕ್ಕೆ ಮೇಲ್ಪಟ್ಟವರಲಿ, ಆದರೆ ನಂಗೆ ಆಗ 96 ವರ್ಷ. ಕೊಡಗಿನ ಹಂಗೇ ಕರ್ನಾಟಕದ ಕ್ರೀಡಾ ಇಲಾಖೆ, ಆಟೋಟಗ / ಕ್ರೀಡೆಗಳಲಿ ಹಂಗೇ ಜಾನಪದ ಗೀತೆಗಳ್‌ಲ್ಲಿ ರಾಜ್ಯ ಮಟ್ಟದಲ್ಲಿ, ಜಿಲ್ಲಾ



ಮಟ್ಟದಲಿಯೂ ಪ್ರಶಸ್ತಿ ಮತ್ತೆ ಬಹುಮಾನಗಳ್ ಪಡೆದುದನ್ನು ಗುರುತಿಸಿ, ಕ್ರೀಡಾ ಇಲಾಖೆ 2019ನೇ ಸಾಲ್‌ಲೀ ಆಗಸ್ಟ್ ತಿಂಗ 29ನೇ ತಾರೀಕ್ ಗುರುವಾದ ದೆಹಲಿಲಿ ಜರ್‌ಗಿದ 'ಫಿಟ್ಟ್ ಇಂಡಿಯಾ' ಕ್ಯಾಂಪೇನ್‌ಲಿ ಭಾಗವಹಿಸಿಕೆ ನನ್ನನ್ನ ಆಯ್ಕೆ ಮಾಡಿತ್ತ್. ಹಂಗೇ ಕೊಡಗಿನ ಕ್ರೀಡಾ ಇಲಾಖೆ ಅಧಿಕಾರಿಗ ನನ್ನ ಬಯೋಡೇಟ ಮತ್ತೆ ಆಧಾರ್‌ಕಾರ್ಡ್ ಮತ್ತೆ ಇನ್ನಿತರ ಸರ್ಟಿಫಿಕೇಟ್‌ಗಳ್‌ನ ತರ್‌ಸಿಕಂಡ್ ದೆಹಲಿಗೆ ಕಳ್‌ಹಿಸಿ ಕೊಟ್ಟೊ.

ನನ್ನೊಟ್ಟಿಗೆ ಸಿ.ಯಲ್. ಕಾಳಪ್ಪ ಮತ್ತೆ ಶ್ರೀಮತಿ ಸೀತಾ ಚಿಟ್ಟಿಯಪ್ಪ ಎಂಬವರ್‌ನ್ನ ಅವರ ಕ್ರೀಡೆಯ ಸಾಧನೆಗಳ ಗುರ್‌ತಿಸಿ ನನ್ನೊಟ್ಟಿಗೆ ಕಳುಹಿಸಿಕೊಟ್ಟಿದ್ದೊ. ನಾನ್ ನನ್ನ ಸಹಾಯಕ್ಕೆ ನನ್ನ ಮೊಮ್ಮಗ ಲಿಕಿನ್ ಬೆಳ್ಯಪ್ಪ ಯಂ.ಕಾಂ. ಇವನ್ನ ನಾನ್ ಕರ್‌ಕ್ಂಡಿದ್ದೆ. ಹಂಗೆನೇ ನಾವು ನಾಲ್ಕು ಜನ 26–8–2019ರ ಸೋಮವಾರ ಕುಶಾಲನಗರದ ವಿಮಾನ ಬುಕ್ಕಿಂಗ್ ಕೇಂದ್ರಕ್ಕೆ ಹೋಗಿ ಬೆಂಗಳೂರಿಂದ ಡೆಲ್ಲಿಗೆ ಪ್ರಯಾಣ ಮಾಡಿಕೆ ಮತ್ತೆ ಹಿಂತಿರುಗಕೆ ತಲಾ ರೂ. ಹತ್ತು ಸಾವಿರದಂಗೆ ಟಿಕೇಟ್ ತೆಗೆದ್‌ಕೊಂಡೊ. ಸುರುಗೆ ನಾವೇ ಖರ್ಚ್ ಮಾಡಾಕ್ಕಾಗಿತ್ತ್. ಆಮೇಲೆ ಇಲಾಖೆನವು ಖರ್ಚಿವೆಚ್ಚ ಎಲ್ಲಾ ನಡ್‌ಸಿ ಬ್ಯಾಂಕ್ ಖಾತೆಗೆ ಜಮ ಕೊಟ್ಟಿವ್‌ಂತ ಹೇಳಿದ್ದೊ.

ದಿನಾಂಕ 27ರಂದ್ ರಾತ್ರಿ ಕೊಡಗ್‌ಂದ ಮೈಸೂರಿಗೆ ಕಾರ್ ಪ್ರಯಾಣ ಮಾಡಿ ಆಮೇಲೆ ಮೈಸೂರ್‌ಂದ ಬೆಂಗಳೂರಿಗೆ ಬಸ್ಸ್‌ಲಿ ಪ್ರಯಾಣ ಮಾಡಿ ದಿನಾಂಕ 28ರ ಬುಧವಾರ ಬೆಳಿಗ್ಗೆ 11–30 ಗಂಟೆಗೆ ಬೆಂಗಳೂರ್‌ಂದ ವಿಮಾನ ಹತ್ತಿ ಮಧ್ಯಾಹ್ನ 1–15ಕ್ಕೆ ದೆಹಲಿಯ ಇಂದಿರಾಗಾಂಧಿ ವಿಮಾನ ನಿಲ್ದಾಣಲಿ ಇಳ್‌ದೊ. ಕೂಡಲೇ ಬೆಂಗಳೂರಿನ ಕ್ರೀಡಾ ಇಲಾಖೆನವು ಅವರ ಕಾರ್‌ಲ್ ನಮ್ಮನ್ನ ದೆಹಲಿಯ ಅಶೋಕ ಹೊಟೇಲಿಗೆ ಕರ್‌ದ್‌ಕೊಂಡ್ ಹೋದೊ. ಅಲ್ಲಿ ನಮ್‌ಗೆ ಉಳಿಯಕೆ ರೂಮು ಮತ್ತೆ ಊಟದ ವ್ಯವಸ್ಥೆಗಳ್‌ನ್ನ ಏರ್ಪಡಿಸಿದೊ. ದಿನಾಂಕ 28ರಂದ್ ಅಲ್ಲಿಯೇ ಉಳ್ಕಂಡ್ ಮಾರಣೆ ದಿನ ತಾ. 29ರ ಗುರುವಾರ ಬೆಳಗ್ಗಿನ ಕಾಫಿ ತಿಂಡಿ ಮುಗ್‌ಸಿಕಂಡ್ ಸುಮಾರ್ 9 ಗಂಟೆ ಸಮಯಕ್ಕೆ ಕ್ರೀಡಾ ಇಲಾಖೆ ನಮಗೆ ಮೂರು ಜನಕ್ಕೆ ಸಮವಸ್ತ್ರ ಕೊಟ್ಟ್, ಇಂದಿರಾಗಾಂಧಿ ಒಳಾಂಗಣ ಕ್ರೀಡಾಂಗಣಕ್ಕೆ ಗೇಟ್‌ಪಾಸ್ ಕೊಡಿಸಿ, ರಾಷ್ಟ್ರ ಪ್ರತಿನಿಧಿಗಳ ವೇದಿಕೆಯಲ್ಲಿ ನನ್ನನು ಮುಂದಿನ ಸಾಲ್‌ಲೀ ಕೂರಿಸಿದೊ.

ಪೂರ್ವಾಹ್ನ 10–30ಕ್ಕೆ ಸರಿಯಾಗಿ ಪ್ರಧಾನಮಂತ್ರಿ ನರೇಂದ್ರ ಮೋದಿಯವು ಇತರ ಮಂತ್ರಿಗಳೊಟ್ಟಿಗೆ ಆಗಮಿಸಿ ವೇದಿಕೆಲಿ ಆಸೀನರಾದೊ. ಮೊದಲು ಪ್ರಾರ್ಥನೆ ಆದ ನಂತರ ಹೆಸ್‌ರ್ ಹೇಳಿ ನಮ್ಮನ ಸ್ವಾಗತಿಸಿದೊ. ಸ್ವಾಗತ ಭಾಷಣದ ಆದ ಕೂಡಲೇ ಫಿಟ್ಟ್ ಇಂಡಿಯಾಕ್ಕೆ ಸಂಬಂಧಿಸಿ ಪ್ರದರ್ಶನಗಳ್ನ ಶಾಲಾ ವಿದ್ಯಾರ್ಥಿಗಳಿಂದ, ಯುವಕ ಯುವತಿರಿಂದ, ನಟಾ–ನಟಿಯರಿಂದ, ಕ್ರೀಡಾಪಟುಗಳಿಂದ, ಯೋಗಾಶನ ಮಾಡುವರಿಂದ ಹಲವಾರು ಪ್ರದರ್ಶನಗಳ ಮೂಲಕ ಪ್ರದರ್ಶಿಸಿ ತೋರಿಸಿಕೊಟ್ಟೊ. ಇಷ್ಟ್ ಮಾತ್ರ ಅಲ್ಲದೆ, ಹಗ್ಗ ಜಿಗಿತ, ಹಾಡುಗಾರಿಕೆ, ಸ್ವಚ್ಛತೆಯ ಪ್ರದರ್ಶನ, ಕಂಬಗಳ ಮೇಲೇರಿ ಕೆಳಮುಖವಾಗಿ ಇಳಿಯುವಿಕೆ, ಕಬಡ್ಡಿ ಆಟ, ಹಾಕಿ ಆಟ ಮುಂತಾದ ಆಟಗಳ ಪ್ರದರ್ಶಿಸಿದೊ. ಇದರ ಅರ್ಥ ಇಷ್ಟೆ, ನಮ್ಮ ಭಾರತ ದೇಶ ಎಲ್ಲಾ ರೀತಿಂದ ಎಂದರೆ, ಆರೋಗ್ಯಂದ ದೈಹಿಕವಾಗಿ ಮಾನಸಿಕವಾಗಿ, ಸಾಮಾಜಿಕವಾಗಿ ಅಭಿವೃದ್ಧಿ ಹೊಂದೊಕ್ಕುಂತ ಪ್ರಧಾನಿಯವರ ಆಶಯ. ಭಾರತ ಪ್ರಪಂಚದಲ್ಲಿ ಮಾದರಿ ದೇಶ ಆಕುಂತ ನರೇಂದ್ರ ಮೋದಿಯವರ ಉದ್ದಿಶ್ಯ. ವೇದಿಕೆಯಲ್ಲಿ ರಾಷ್ಟ್ರ ಪ್ರತಿನಿಧಿಗಳೂ, ಮಂತ್ರಿ ಮಂಡಲದವು ಆಸೀನರಾಗಿದ್ದೊ ಲಕ್ಷಾಂತರ ಮಂದಿ ಗ್ಯಾಲರಿಲಿ ಆಸೀನರಾಗಿದ್ದೊ.

ಕಾರ್ಯಕ್ರಮ ಮುಗಿದ ನಂತರ ಪ್ರಧಾನಿಯವು ಒಬ್ಬರೇ ಹಿಂದಿಲಿ ಭಾಷಣ ಮಾಡಿದೊ. ಭಾಷಣದ ನಂತರ ವಂದನಾರ್ಪಣೆ ನಂತರ ಸಭೆ ಮುಕ್ತಾಯ ಆದ ಕೂಡಲೇ ಪ್ರಧಾನಿ ನರೇಂದ್ರ ಮೋದಿಯವು ವೇದಿಕೆಂದ ಇಳ್ದ್ ಪ್ರತಿನಿಧಿಗಳಾದ ನಮಿಗೆ ನಮಸ್ಕಾರ ಮಾಡುತ್ತಾ ಸಾಗಿ ಬರುತ್ತಿದ್ದು. ಮುಂದಿನ ಸಾಲ್‌ಲೀ ಇದ್ದವ ನಾನ್ ನನ್ನ ಹತ್ತಿರ ಬಾಕನ ಅವರ ಎರಡ್ ಮುಂಗೈಗಳನ್ನ ಹಿಡ್ಕಂಡ್ ಇಂಗ್ಲಿಷ್ ಭಾಷೆಲೇ ನಾನ್ ಕರ್ನಾಟಕದ ಕೊಡಗು ಜಿಲ್ಲೆಂದ್ ಬಂದೊಳೆ ನನ್ನ ಹೆಸ್‌ರ್ ಬೆಳ್ಯಪ್ಪ ನನ್ನ ಪ್ರಾಯ 95. ಈಗ ತಾನೆ ಫಿಟ್ ಇಂಡಿಯಾ ಕಾರ್ಯಕ್ರಮ ಮುಗಿದೊ. ನನ್ನ ಎಲ್ಲಾ ರೀತಿಂದ ಫಿಟ್ ಆಗಿ ಒಳೇಂತ ಹೇಳ್‌ದೆ. ಆಗ ಪ್ರಧಾನಿಯವು ನಗಾಡಿಕೊಂಡೆ ಇಂಗ್ಲಿಷ್‌ಲೇ ಬಹಳ ಒಳ್ಳೆದ್, ಬಹಳ ಒಳ್ಳೆದ್‌ಂತ ಹೇಳಿಕಂಡ್ ನನ್ನ ಆರೋಗ್ಯಕ್ಕೆ ತುಂಬಾ ಕುಷಿಪಟ್ಟೊ. ನಾನ್ ಅವರ ಕೈಗಳನ್ನ ಬುಟ್ಟ ಮೇಲೆ ಅವು ಮುಂದೆ ಹೋದೊ. ಇದ್ ಅವರ ದೊಡ್ಡ ಗುಣ, ದೊಡ್ಡ ಹೃದಯ, ದೊಡ್ಡ ಮನಸ್ಸ್.

ಆ ನಂತರ ಅಲ್ಲಿಯೇ ಒಂದು ಕಡೆ ಊಟೋಪಚಾರ ಮುಗಿದ ಮೇಲೆ, ಕ್ರೀಡಾ ಇಲಾಖೆನವು ಆಶೋಕ ಹೊಟೇಲಿಗೆ ಕರೆದುಕೊಂಡ್ ಬಂದ್ ಬುಟ್ಟೊ. ಆ ದಿನ ಸಂಜೆ ಹೊತ್ತು 6–7 ಕಿ.ಮೀ. ದೂರದ ಒಂದು ಮಾರ್ಕೆಟಿಗ್ ಹೋಗಿ ಶಾಪಿಂಗ್ ಮುಗಿಸಿಕಂಡ್ ತಿರುಗಿ ಹೋಟೇಲ್‌ಗೆ ಬಂದ್ ರಾತ್ರಿ ಊಟ ಮಾಡಿ ಸುಖನಿದ್ರೆಗ್ಯೆದೊ. ತಾ. 30ರಂದ್ ಬೆಳಗ್ಗಿನ 10–30ರ ಸಮಯದ ದೆಹಲಿ–ಬೆಂಗಳೂರು ವಿಮಾನ ಹತ್ತಿ ವಿಮಾನ ನಿಲ್ದಾಣಕ್ಕೆ ಬಂದೊ. ಆದರೆ ಆಗಿನ 10–30ರ ವಿಮಾನ ನಿಲ್ದಾಣಕ್ಕೆ ಬಾತೆಯಿಲ್ಲೆ. ಆಮೇಲೆ ಅಪರಾಹ್ನ 3–00 ಗಂಟೆಗೆ ಏರ್ ಇಂಡಿಯಾ ವಿಮಾನ ಹತ್ತಿ ಸಂಜೆ 6–00 ಗಂಟೆಗೆ ಬೆಂಗಳೂರು ತಲುಪಿದೊ. ಕೂಡಲೇ 6–30ಕ್ಕೆ ಬೆಂಗಳೂರು ಮಡಿಕೇರಿ ಬಸ್ಸು ಹತ್ತಿ ಬೆಳಗ್ಗಿನ ಜಾವ 4–00 ಗಂಟೆಗೆ ಮಡಿಕೇರಿಗೆ ತಲುಪಿ ಕಾರ್‌ಲಿ ಮನೆಗೆ ಬಂದೊ. ಇದ್ ನನ್ನ ಹಳ್ಳಿಯಿಂದ ಹಿಡ್ದ್ ಡೆಲ್ಲಿಯವರೆಗಿನ ಅನುಭವದ ಸವಿನೆನಪು. ಹಳ್ಳಿಗೆ ಬಂದ ಮೇಲೆ ಕುಟುಂಬದಿಂದ, ಸಂಘ ಸಂಸ್ಥೆಗಳಿಂದ, ಬಂಧು ಬಾಂಧವರಿಂದ ಹತ್ತಾರ್ ಸನ್ಮಾನಗಳಿಗೆ ಭಾಜನನಾದೆ.

ನಮ್ಮ ಖರ್ಚು ವೆಚ್ಚಗಳ್ನ ರಾಜ್ಯ ಕ್ರೀಡಾ ಇಲಾಕೆ ನಮ್ಮ ಬ್ಯಾಂಕು ಖಾತೆಗೆ ಜಮಾ ಕೊಟ್ಟತ್.

---

**ಕಟ್ರತನ ಕೆ. ಬೆಳ್ಯಪ್ಪ**
ನಿವೃತ್ತ ಅಧ್ಯಾಪಕ, ಬಲಮುರಿ ಗ್ರಾಮ
ಮೊಬೈಲ್ : 8197063328




# ಜಾತಿ ವ್ಯವಸ್ಥೆ?



**ವ್ಯಾಸ (ಕುಂಞೇಟಿ ಶಿವರಾಮ ಗೌಡ)**

ವರ್ಣಾಶ್ರಮ, ಜಾತಿ, ಒಳಜಾತಿ; ಸೆಕ್ಯುಲರ್‌ನಂತ ಸಬ್ದಗ ಇಂದ್ ಬಾರಿ ಚಲಾವಣೆ ಮತ್ತೆ ಚರ್ಚೆಲಿ ವೊಳೊ. ವರ್ಣಾಶ್ರಮಂತ ಹೇಳ್ರೆ ಮೈ ಬಣ್ಣ ನೋಡಿ ತೀರ್ಮಾನ ಮಾಡ್ವ ಮಾತ್ ಸರಿ ಅಲ್ಲ. ಆರ್ಯರ ಕಾಲಲಿ ಒಬ್ಬನ / ಒಬ್ಬಳ ವೈಯಕ್ತಿಕ ಅರ್ಹತೆಂದ ವರ್ಣ ನಿಗಂಟ್ ಆತಿತ್ತ್. ಹುಟ್ಟಿನ ಆಧಾರಲಿ ಎಲ್ಲ. ವಾಲ್ಮೀಕಿ, ವಿಶ್ವಾಮಿತ್ರ, ವಸಿಷ್ಟ, ಕನಕದಾಸ ಇತ್ಯಾದಿ ಸತಮಾನಗಳ ಕಾಲ ವಂಸ ಪಾರಂಪರ್ಯ ಒಂದು ಕಸುಬ್‌ನ ಮಾಡ್ತಾ ಬಜಂದ ಜನಗಳ ಸಂಖ್ಯೆ ಹೆಚ್ಚಾದಂಗೆ ಹುಟ್ಟಿಂದ ಜಾತಿ ವ್ಯವಸ್ಥೆ ಆಚರಣೆ ಸುರು ಆತ್. ಇಂದಿನ ದಿನಗು ಕಾನೂನು ಪ್ರಕಾರ, ಮತ್ತೆ ಸಂವಿದಾನದ ಅದೇಸದಂಗೆ ಜಾತಿಗೆ ಮಾನ್ಯತೆ ಇಲ್ಲೆ. ಜಾತ್ಯಾತೀತಂತ ಎಷ್ಟ್ ಬೊಬ್ಬೆ ಹೊಡ್ದರೂ ಸರ್ಕಾರದ ಎಲ್ಲಾ ದಾಕಲೆಗೆ ಜಾತಿ ಕಲಂ ಬೇಕೇ ಬೇಕು. ಇದ್ ನಾವು ಗಾಂದಿವಾದಿಂತ ಭಾಸಣ ಮಾಡಿ, ಬಾರ್ಲಿ ಹೋಗಿ ಹೆಂಡ ಕುಡ್ದಂಗೆ.

ಭಾರತ ದೇಸಲಿ ಮಾತ್ರ ಜಾತಿ ವ್ಯವಸ್ಥೆ ವುಟ್ಟುಂತ ಪ್ರಕಾರ ತೆಗೆವ ಸ್ವಯಂಗೋಸಿತ ಬುದ್ಧಿಜೀವಿಗಳ ವಾದ. ಹಾಂಗೆ ನೋಡ್ರೆ 'ಸೆಮೆಟಿಕ್' ಮಕಗಳ್‌ಲಿ ಕೂಡಾ ನೂರಾರ್ ಜಾತಿ, ಉಪಜಾತಿ, ಒಳಪಂಗಡಗ ವೊಳೊ. ಮುಸ್ಲಿಮ್ ಮತ್ತು ಕ್ರಿಶ್ಚನ್‌ನಂತ ಏಕ ದೇವೋಪಾಸಕ ಮತಗಳ್ಲಿ ಕೂಡಾ ಜಾತಿವ್ಯವಸ್ಥೆ ಕಂಡದೆ. 'ಓನ್‌ಲೈನ್'

ವಿವಾಹ ವೆಬ್‌ಸೈಟ್ ಹೋದರೆ ಅಲ್ಲಿ ಇಂತ ಒಂದು ಜಾತಿ ವರಂಗೆ ಇಂತ ಜಾತಿನ ವದು ಬೇಕುಂತ ಜಾಹೀರಾತ್ ಕಂಡಬಂದದೆ. ಈ ಜಾತಿ ವ್ಯವಸ್ಥೆ ಪ್ರಪಂಚದ ಎಲ್ಲಾ ಮೂಲೆಲಿ ಬೇರೆ ಬೇರೆ ಹೆಸ್ರ್‌ಂದ್ ಚಾಲ್ತಿಲಿ ವುಟ್ಟು ಮಾರ ಅಲ್ಲ ಬೆಳೆತಾವುಟ್ಟು.

ನಮ್ಮ ದೇಸದ ವರ್ಣಾಶ್ರಮ ಯಾನೆ ಜಾತಿ ಪದ್ಧತಿಲಿ ಯುರೋಪ್‌ಲಿ ನಡ್ದಷ್ಟ್ ಯುದ್ದಗ, ಧಾರ್ಮಿಕ ನರಹತ್ಯೆ ನಡ್ತ್‌ಲೆ. ಇಸ್ಲಾಂ ಮತ್ತೆ ಕ್ರಿಶ್ಚನ್ನರ ಹೋರಾಟ ಶತಮಾನಗಳಂದ ಇಂದೂ ನಡೆತಾವುಟ್ಟು. ಮೊಗಲ, ಬ್ರಿಟಿಷ್ ಆಡಳಿತದ ಸಮಯಲಿ ನಮ್ಮ ದೇಸಲಿ ಧಾರ್ಮಿಕ ಹತ್ಯೆ ಮತಾಂತರ ನಡ್ದ ಕಾರಣ ಪಾಕಿಸ್ಥಾನ ಆತ್. ಇಂದ್ ಕೂಡ ದೇಸ ಧಾರ್ಮಿಕ ಅಸಹಿಷ್ಣುತೆಂದ ಸಿಕ್ಕಿ ಹಾಕಿಕೊಂಡುಟ್ಟು.

ಹಾಂಗಾರ್ ಇಂದಿನ ದಿನಲಿ ಜಾತಿವ್ಯವಸ್ಥೆ ಮುಂದುವರಿಯೊದು ಸರಿಯೋಂತ ಪ್ರಶ್ನೆ ಮಾಡ್ರೆ ಹೌದು ಮತ್ತೆ ಇಲ್ಲೆಂತ ಎರ್ಡು ಉತ್ತರ ಬಂದದೆ. ನಮ್ಮ ದೇಶಲಿ ಚಾಲ್ತಿ ಇರ್‌ವ ಜಾತಿ ವ್ಯವಸ್ಥೆಲಿ ತುಂಬಾ ಕಾಂಬ ಸಂಗತಿಗ ವೊಳೊ, ಅದರೊಟ್ಟಿಗೆ ಶತಮಾನಗಳ್‌ಂದ ಬಂದ ಹಿಂದೂ ಸಮಾಜನ ರಕ್ಷಣೆ ಮಾಡಿ ವೊಳ್ಸಿದ ಉತ್ತಮ ಅಂಶಗ ಕೂಡಾ ವುಟ್ಟು. ಅಸ್ಪೃಶ್ಯತೆ ಮತ್ತೆ ಬೇರೆ ಕೆಲವು ಕೆಟ್ಟ ಸಂಪ್ರದಾಯಗ ಕಂಡ್ ಬಂದದೆ. ಈ ಅಸ್ಪೃಶ್ಯತೆ ನಮ್ಮ ಸಮಾಜಕ್ಕೆಂತ ಹೇಳ್ವ ದೊಡ್ಡ ಮರಕ್ಕೆ ಹಿಡ್ದ ಬಂದಣಿಕೆಂತ ಹೇಳ್‌ಕ್. ನಿದಾನಲಿ ಮರವೇ ಸಾಯುವಂಗೆ ಈ ಬಂದಣಿಕೆ ಮಾಡ್ದೆ. ಜಾತಿ ವ್ಯವಸ್ಥೆಗೆ ಪೂರಕ ಮತ್ತೆ ವಿರೋದ ಮಾಡಿ ಒಂದು ದೊಡ್ಡ ಪುಸ್ತಕವೇ ಬರೆಕ್.

ಪ್ರಪಂಚದ ಇತಿಹಾಸನ ಅಬ್ಯಾಸ ಮಾಡ್ರೆ ಮದ್ಯಯುಗದ ಕಾಲಂದಳೇ ಜಾತಿ ವ್ಯವಸ್ಥೆ ಇಲ್ಲದ ಅನೇಕ ದೇಸಗ ಕ್ರಿಶ್ಚನ್ ಮತ್ತೆ ಮುಸ್ಲಿಂ ಮತಗಳ ಹೊಡೆತಕ್ಕೆ ಸಿಕ್ಕಿ ಅವರ ಮೂರು ನಾಗರಿಕತೆ, ಸಂಸ್ಕೃತಿ ನಾಸ ಆದ್ದ್ ಕಂಡದೆ. ರೋಮ್, ಗ್ರೀಸ್, ಇರಾನ್, ಇರಾಕ್, ಅಫ್ಘಾನಿಸ್ತಾನ ಇವರ ನಾಗರಿಕತೆ ಇಂದ್ ಕಾಂಬೊದಿಲ್ಲೆ. ಯುರೋಪ್, ಆಫ್ರಿಕಾ, ಅಮೇರಿಕದ ಮೂಲನಿವಾಸಿಗಳ ನಾಗರಿಕತೆ ಇಂದ್ ವಸ್ತು ಸಂಗ್ರಹಾಲಯಲಿ ಮಾತ್ರ ಕಂಡದೆ. ಆ ನಾಗರೀಕತೆ ಸೋಲಿಕೆ ಮುಖ್ಯ ಕಾರಣ ಅವರ್‌ಲ್ಲಿ ವರ್ಣಾಶ್ರಮ ಯಾನೆ ಜಾತಿ ಪದ್ಧತಿ ಇಲ್ಲದ್ದೇ ಮುಖ್ಯ ಕಾರಣಂತ ಸ್ವಾಮಿ ವಿವೇಕಾಂದರ್ ಅಭಿಪ್ರಾಯ ಪಟ್ಟವೆ. ನಮ್ಮಲ್ಲಿ ನೂರಾರ್ ಜಾತಿಗ

ಒಳಜಾತಿಗ ಮೇಲೆಗೆ ಕಂಡರೂ ಸಾವಿರಾರ್ ವರ್ಸದ ಗುಲಾಮಗಿರಿ, ಮತಾಂತರ, ನರಹತ್ಯೆ, ನಡ್ಡರೂ, ಇನ್ನೂ 80% ಹಿಂಮಗ ಈ ದೇಸಲಿ ಒಳ್ದದೆ ಒಂದು ವಿಸ್ಮಯ ಸಂಗತಿ.

ಜಾತಿ ವ್ಯವಸ್ಥೆಲಿರುವ ಅನೇಕ ಕಂದಾಚಾರಗಳ ನಾವು ನಿದಾನಲಿ ಕಡಿಮೆ ಮಾಡಿ ಸಮಾಜನ ಒಂದು ಮಾಡೊಕು. ಅದೇ ವಿಸಯಲಿ ರಾಷ್ಟ್ರೀಯ ಸ್ವಯಂಸೇವಕ ಸಂಘದ ಸರಸಂಘ ಚಾಲಕರಾಗಿದ್ದ ಶ್ರೀ ಮಾದವ ಸದಾಶಿವ ಗೋಳ್ವಾಲ್ಕರ್ ಹೇಳ್ದ ಮಾತ್ ನಂಗೆ ನೆಂಪು ಬಂದದೆ. ಮೇಲ್ವರ್ಗದ ಜನಗ ಕೆಳವರ್ಗದ ಜನರೊಟ್ಟಿಗೆ ಸುರುಗೆ 'ರೋಟಿ ವ್ಯವಹಾರ' ಮಾಡೊಕು. ಮುಂದೆ 'ಬೇಟಿ ವ್ಯವಹಾರ' ಮಾಡೊಕು. ಇದರ ಅರ್ತ ಏನಂತ ಹೇಳ್ರೆ ಕೆಳವರ್ಗದ ಜನರೊಟ್ಟಿಗೆ ನಾವು ಊಟೋಪಚಾರ ಸುರು ಮಾಡೊಕು. ಮುಂದೆನ ದಿನಗಳ್ಲಿ ವಿವಾಹ ಸಂಬಂದ ನಡ್ಸೊಕುಂತ ಅಭಿಪ್ರಾಯ. ಇಂದ್ ಮೇಲ್ವರ್ಗದವು ಮತ್ತೆ ಕೆಳವರ್ಗದವರೊಳಗೆ ಸಾಮೂಹಿಕ ಬೋಜನ ನಡಿತಾವುಟ್ಟು. ವಿವಾಹ ಸಂಬಂದಗ ನೌಕರಿ ಮಾಡ್ವ ವಿದ್ಯಾವಂತರ್‌ಲಿ ಜಾತಿನ ಮೀರಿ ವಿವಾಹ ನಡೆತಾ ವುಟ್ಟು. ಈ ಸಾಮಾಜಿಕ ಬದಲಾವಣೆನ ಸ್ಪಷ್ಟ ಚಿತ್ರ ಇನ್ನ್ ಹತ್ತ್ ವರ್ಸ್‌ಲಿ ದೊಡ್ಡ ಪ್ರಮಾಣಲಿ ಕಂಡ್ ಬಾದು. ಈ ಪ್ರಕ್ರಿಯೆಂದ ಸಮಾಜ ಸಂಗಟನೆಗೆ ಮತ್ತೆ ಅಭಿವೃದ್ಧಿ ಉತ್ತೇಜನ ಸಿಕ್ಕಿದೆ. ಪ್ರಪಂಚ ನಾವು ಇನ್ನೊಮ್ಮೆ ವಿಶ್ವ ಗುರು ಸ್ತಾನಕ್ಕೆ ಹೋಕೆ ಸಹಕಾರಿ ಆದ್ದೆ.

ಜಾತಿ ವ್ಯವಸ್ಥೆನ ಒಮ್ಮೆಗೆ ನಿರ್ಮೂಲ ಮಾಡ್ಕೆ ಸಾದ್ಯ ಇಲ್ಲೆ. ಕ್ರಾಂತಿ ಮಾಡಿ ವರ್ಗ ಸಂಗರ್ಸದ ಮೂಲಕ ಸಮಾಜ ಕಟ್ಟಿಕೆ ಪ್ರಯತ್ನ ಮಾಡ್ದ ದೇಸಗ ಇಂದ್ ಸೋತು ಹೋಗೊಳೊ. ಮೇಲ್ವರ್ಗದ ಜನಗಳ ಜವಾಬ್ದಾರಿ ಇಂದ್ ಹಿಂದೆಂದೊಳು ಹೆಚ್ಚಿಗೆ ವುಟ್ಟು. ಕೆಳವರ್ಗದವರ ಮೇಲಕ್ಕೆ ಎತ್ತಿಗೆ ಪ್ರಯತ್ನ ಮಾಡೊಕು. ಅದ್ ಬುಟ್ಟ್ ಕ್ರಾಂತಿ ಮಾಡ್ವೆಂತ ಹೇಳಿ ಮೇಲ್ವರ್ಗದ ಜನಗಳ ಕಾಗಡೆ ಎಳೆದು ತಪ್ಪು.

ಕೆಳವರ್ಗದ ಜನಗ ಕೀಳರಿಮೆ ಬುಟ್ಟು ಪ್ರಯತ್ನಂದ ಮುಂದೆ ಹೋಕು. ಈಗ ಸರಕಾರಂದಳೂ ಸಹಾಯ ಸಿಕ್ಕಿದೆ. ವಿದ್ಯೆ ಕಲ್ತ್ ಮುಂದೆ ಹೋಕೆ ಕೆಳವರ್ಗದವು ತುಂಬಾ ಪ್ರಯತ್ನ ಮಾಡೊಕು. ಅದೇ ರೀತಿ ಯಾವುದೇ ಕಾಲಲಿ ಆಚರಣೆಗೆ ಬಂದ ಕಾಲಬಾಹಿರ ಸಂಗತಿಗಳ ಬುಟ್ಟು ಒಳ್ಳೆ ಆಚರಣೆ ಸಂಪ್ರದಾಯಗಳ ಕಡೆಗೆ ಹೋಕು. ಉದಾರಣೆ

ಪ್ರಾಣಿಬಲಿ ಕೊಡುವ ಪದ್ಧತಿ ಇಂದಿಗೂ 90% ಜನರಲ್ಲಿ ಆಚರಣೆಲಿ ವುಟ್ಟು. ಒಂದು ಜೀವನ ಬಲಿ ಕೊಟ್ಟು ನಮ್ಮ ಜೀವಕ್ಕೆ ಸುಕ ಎಂದಿಗೂ ಸಿಕ್ಕದ್. ಪ್ರತಿಯೊಬ್ಬನೂ ನಮ್ಮ ದೇಸದ ಸಂಸ್ಕೃತಿ ನಾಗರಿಕತೆ ತಿಳಿಕೆ ಸಂಸ್ಕೃತ ಬಾಸೆನ ಕಡ್ಡಾಯ ಕಲೆಕು. ಯುರೋಪಿನವು ಬರ್ದ ನಮ್ಮ ಸೋಲಿನ ಚರಿತ್ರೆನ ಕಣ್ಣ್ ಮುಚ್ಚಿ ಒಪ್ಪಿಕಂಡು ಸರಿ ಕಾಂಬೊದಿಲ್ಲೆ. ಇದ್ ಇಂದಿಗೂ ನಮ್ಮಲ್ಲಿ ಬೆಳ್ದ್ ಬಂದ ಗುಲಾಮಗಿರಿನ ನೆಂಪು ಮಾಡ್ದೆ. ಈ ವಿಸಯಲಿ ತಿಳ್ದವು ಇನ್ನೂ ಹೆಚ್ಚಿನ ಮಾಹಿತಿ, ಚರ್ಚೆ ಇತ್ಯಾದಿ ನಡ್ದರೆ ಒಳ್ಳೆ ಅಂಶಗ ಮುಂದೆ ನಾವ್ಗೆ ಸಿಕ್ಕಿದೆ. ಅಂತೂ ನಾವು ಒಳ್ಳೆ ವಿಷಯಗಳ ಪ್ರಪಂಚದ ಎಲ್ಲಾ ಮೂಲೆಂದ ಸ್ವೀಕಾರ ಮಾಡಿ ನಮ್ಮದೇ ರೀತಿಲಿ ಅದರ ಸದುಪಯೋಗ ಮಾಡೊಕು. ಈ ಮೂಲಕ ನಾವು ಇನ್ನೊಮ್ಮೆ ಪ್ರಪಂಚಲಿ ವಿಶ್ವಗುರು ಸ್ಥಾನಕ್ಕೆ ಏರುದೇ ನಮ್ಮ ಕನ್ಸ್ಂತ ತಿಳ್ದ್ ಪ್ರಯತ್ನ ಮಾಡೊಕು.

---

**ವ್ಯಾಸ (ಕುಂಞೇಟಿ ಶಿವರಾಮ ಗೌಡ)**
ಕೊಲ್ಲಮೊಗ್ರು, ಸುಳ್ಯ
ಮೊಬೈಲ್ : 8762121694






# ಕಿನ್ನಿರಿ ಬೊಳ್ಳಿ ಮತ್ತೆ ತೊಟಿಗಿಲ್



**ಡಾ. ಪುನೀತ್ ರಾಘವೇಂದ್ರ ಕುಂಟುಕಾಡು**

"ಅವ್ವಾ, ನಾ ನಾಳ್ದ್ ಸೋಮಾರ ಬೆಂಗ್ಳೂರ್ಗೆ ಹೊರ್ಟನೆ. ಬಂದ್ ಒಂದ್ವಾರ ಆತಲೆ. ಹೈದಂಗೆ ಸಮ್ಮರ್ ಕ್ಯಾಂಪ್‌ತ ಹತ್ತ್ ಸಾವ್ರ ಕೆಟ್ಟ್ಯೆಳೆ ಬೇರೆ!!" ಮಂಜ ಅಣ್ಣುನ ಮಾತ್ ಕೇಳಿ ಚಪ್ಪೆ ಆದ ಯಂಕಮ್ಮಕ್ಕಂಗೆ 'ಪುಳ್ಳಿ ಇನ್ನೊಂದ್ ತಿಂಗ ಇಲ್ಲಿಯೇ ಇರ್ಲಿತ' ಹೇಳಿಕೆ ಮನ್ಸ್‌ನ ಕೊಡೀ ಮುಟ್ಟ ಇದ್ದರೂ ಏಕೋ ನಾಲಿಕೆನೇ ಮೊಗ್ಚಿತ್ಲೆ. ಆದರೂ ಮನಸ್ಸಿಲ್ಲಾದ ಮನ್ಸ್‌ಂದ "ಸರ್ ಬುಡ್... ಎಲ್ಲಾ ಓದಿದವು... ಉದ್ಯೋಗಲಿರುವ... ನಾ ಎಂತರತ ಹೇಳ್ದು... ನೀವ್ಗೇ ಗೊತ್ತುಟಲ್ಲಾ... ಹೆಂಗಾದೆನೋ ಹಂಗೆ ಮಾಡಿ... ಓಯ್... ಅಲ್ಲಿ ಚೋಡಿಕರೆನ ಹಲ್ಸಿನ ಮರಲಿ ಒಂದ್ ಬೆಳ್ದ ಹಲ್ಸಿನ ಕಾಯಿ ನೋಡಿದ್ದೆ. ಮುಳ್ಳರ್ಳಿಟು. ಬೇಗ ಹಣ್ಣಾದೋತ ಹೇಳಿಕಾಕಿಕಲೆ. ತೋಟಕೆ ನೀರ್ ಬುಡಿಕೆತ ಹೋದರೆಲ್ಲಾ... ಬಾಕನ ಕೊಯ್ದ್ ತನ್ನಿ.

ಕಾಯಾದರೆ ಕೊಯ್ದ್ ಚೊಂಗುಳಿ ಮಾಡೊನೊ. ಒಳ್ಳೆ ಬೆಳ್ದರೆ ಅಣ್ಣು ತಕೊಂಡೋಗಲಿ. ಹಣ್ಣ್ ಮಾಡಕ್. ಹಪ್ಪಳ, ಮಾಂಬಳ ಲಾಯ್ಕ್ ಒಣ್ಗಿಟ್ಟು. ಈಗಲೇ ಕಟ್ಟಿಸಿನೆ. ಮತ್ತೆ ಒಂದೂ ಗ್ಯಾನನೇ ಇರ್ದುಲೆ"ತ ಗಂಡ ದ್ಯಾಪಣ್ಣಂಗೆ ಹೇಳಿಕಂಡೇ ಬೆಸೆಗೆಂದ ಹಪ್ಪಳ ತೆಗ್ಯಕೆ ಹೋದೊ ಯಂಕಮ್ಮಕ್ಕ. ಯಾಗ ನೋಡ್ರೂ ಚಿಂಟು ಟಿವಿ ನೋಡಿಕಂಡಿರುವ ಹೈದ ಇಂದೇಕೋ ಮರ್ತೋಗಿ ಟಿವಿ ನೈನ್ ಹಾಕಿತ್ ಕಂಡದೆ. "ದೇಶದಾದ್ಯಂತ ಹೆಚ್ಚುತ್ತಿರುವ ಕೊರೊನಾ... ನಾಳೆ ಒಂದು ದಿನದ ರಾಷ್ಟ್ರವ್ಯಾಪಿ ಸ್ವಯಂ ಪ್ರೇರಿತ ಬಂದ್"ತ ಟಿವಿಲಿ ಬಾತ್. ಅಷ್ಟೊತ್ತಿಗೆ ಅಣ್ಣುನ ದೋಸ್ತಿ ಚಾಮುಣುನ ಪೋನೂ ಬಾತ್. "ಓಯ್ ಅಣ್ಣು... ನಾಳ್ದಂದ ಎಲ್ಲಾ ಬಂದ್ ಮಾಡುವ ಲಕ್ಷಣಯ. ಅಮೇರಿಕಂದ ಪಚ್ಚು ಕಾಲ್ ಮಾಡಿತ್ತ್. ಅಲ್ಲಿ ಎಲ್ಲಾ ಪುಲ್ ಬಂದ್ ಮಾಡ್ದಾಂಗೆ ಆಗುಟುಗಡ. ಜನಂಗ ಸೂಪರ್ ಮಾರ್ಕೆಟ್‌ಲಿ ಸಿಕ್ಕಿದರೆಲ್ಲಾ ಬಾಚಿಕಂಡೇ ಹೋದವೆಗಡ. ನೀ ಊರಲ್ಯೊಳ ಅಲ್ಲಾ? ನಂಗನ್ಸಿದೆ ನೀನೂ ಅಲ್ಲಿನೇ ಮುಂದೊರಿದು ಒಳ್ಳದಾತ!! ನಾ ನಾಳ್ದೇ ಹೊರ್ಡೊನೊತೊಳೆ. ಎಲ್ಲಾ ಮುಚ್ಚಿಕೆ ಮೊದ್ಲ್ ಊರ್ ಗೆತ್ತಿಕಣಕ್ ನೋಡು!!! ತೇಳ್ದವನೇ ಪೋನ್ ಇಸಿತ್. ಅಣ್ಣುಗೆ ಎಂತ ಮಾಡೂಕುತ ಗೊತ್ತಾಗ್ತಿಲ್ಲೆ. ಒಂದ್ ಕಡೆ ಆಫೀಸ್, ಕ್ಲೈಂಟ್ ಮೀಟಿಂಗ್, ತಲೆತಿಂಬ ಮೆನೇಜರ್, ಮಂಜನ ಕ್ಯಾಂಪ್... ಹಿಂಗೆ ನೂರೆಂಟ್ ಸುತ್ತುತುಟ್ಟು ತಲೆಲಿ. ಮರದ ಹುಳ ಮರನೇ ಕೊರೆದುಗಡ!! ಇನ್ನ್ ಜಾಸ್ತಿ ತಲೆಲಿ ತುಂಬುಸಿಕಂಡ್ ಕರ್ಗೆಲ್ ಬಚ್ಚಂಗಾಯಿ ಅದು ಬೇಡತ ಆಫೀಸ್‌ನ ರಗಳೆ ಇಲ್ಲದೆ ಇರಕ್‌ತ ಹತ್ತ್ ದಿನಕ್ಕೆ ರಜೆನೇ ಹಾಕೊನೊತ ನೆನ್ಸಿತ್. ಕೆಲವೊಮ್ಮೆ ದೆವ್ವಂಗ ಬುಟ್ಟರೂ ಒಟ್ಟಿಗಿರುವ ಕೊಲೆಗೆ ಬುಡ್ದುಲೆಗಡ. ಹಂಗೆ ಎಡೆಸಿಕ್ಕದ ಕೊಲೆನಾಂಗೆ ಮೇನೇಜರ್‌ನ ಪೋನ್ ಕಾಲೇ ಬಾತ್... ನೀ ಮನೆಂದಳೇ ಕೆಲ್ಸ ಮಾಡಣ್ಣತ!!

ಅಂತೂ ಅಣ್ಣು ಹೈದ ಕೆಲ್ಸ ಏನೋ ಮನೆಂದಳೇ ಮಾಡಿಕೆ ಸುರು ಮಾಡ್ದೇನೋ ಸೆರಿ. ಆದರೆ ಎಷ್ಟ್ ದಿನತ? ಸರ್ಕಾರ ಹೇಳ್ತ್ ಲಾಕ್ ಡೌನ್ ಮಾಡೊನೊ... ಕೊರೋನ ಹಬ್ಬುದರ ತಡ್ಯಕ್‌ತ!! ಎಲ್ಲವರೊಟ್ಟಿಗೆ ಅಣ್ಣುನೂ ಕಾತ್. ನಾಳೆ ಮುಗ್ದದೆ... ನಾಳ್ದ್ ಮುಗ್ದದೆತ. ಕಾದ್ ಕಾದ್ ತಿಂಗಳೇ ಮುಗ್ತ್. ಮಾರಿ ಕೊರೋನ ಮಾತ್ರ ಮಿಜಿ ಮಿಜಿ ತೇಳುವಷ್ಟ್ ಜಾಸ್ತಿನೇ ಆತುಟ್ಟೇ ಹೊರ್ತ್ ಕಮ್ಮಿ ಅಂತೂ ಆತೇಲೆ!! ಹಿಂಗಿರ್ಕಾಕನ ಅಣ್ಣು ತಿರ್ಗಿ ಹೋದಾರ್ ಹೆಂಗೆ?? ಹತ್ನೇ ಕ್ಲಾಸ್‌ಲಿ ದೊಡ್ಡರಜೆತ

ಒಂದೆರ್ಡ್ ತಿಂಗ ಮನೆಲಿ ಕಳ್ದವಂಗೆ ಅಲ್ಲಿಂದ ಮೇಲೆ ಹಿಂಗ್ ತಿಂಗಳ್ ಗಟ್ಟಲೆ ಮನೆಲಿರಿಕೆ ಸಿಕ್ಕಿದ್ ಇದೇ ಸುರು!! ಪಿಯುಸಿಲಿ ಕೋಚಿಂಗ್, ಸಿ ಇಟಿತ ಕಳ್ದರೆ ಇಂಜಿನಿಯರಿಂಗ್ ಮುಗ್ದಾಂಗೆ ಪ್ರಾಜೆಕ್ಟ್ ಕೆಲ್ಸತ ಬೆಂಗ್ಳೂರ್ ಹೋದಂವ ಅಲ್ಲಿಂದಲೇ ಕೆಲ್ಸನೂ ಸುರುಮಾಡಿತ್ತ್. ಇನ್ನ್ ಮೊದ್ಲ್‌ಗೆ ಒಂದ್ ವಾರ ರಜೆ ಹಾಕಿದ್ದೇ ದೊಡ್ಡದ್!! ಅದ್ಕೇ ಸಿಕ್ಕಿದೇ ಚಾನ್ಸ್‌ತ ಮನೆಂದಲೇ ಕೆಲ್ಸನೂ ಮುಂದೊರ್ಸಿತ್. ಸುರುಸುರೂಗೆ ಮೊಡ್ಯಾಳ ಬಟ್ಟೆ ಎತ್ತಿ ಎತ್ತಿ ಒಗಿದುಗಡೆ!! ಅಷ್ಟೇ ಹುರ್ಪುಲಿ ಕೆಲ್ಸ ಏನೋ ಕುಸೀಲೇ ರಪರಪ ನಡೆತಿತ್ತ್... ಆದರೆ ಎಷ್ಟ್ ದಿನತ??

ಮೊನ್ಸನೇ ಆಗಲಿ ಪ್ರಾಣಿನೇ ಆಗಲಿ ಎಷ್ಟೇ ಓಡಿರೂ ಬೊಚ್ಚ್ ಕಾಕನ ತಿರ್ಗಿ ಬಂದೇ ಬರೊಕಲ್ಲ?? ಅಂದೆಲ್ಲಾ ಊರುಗೆ ಬಾಕನ ಎಂತ ಮಾಡಿಕೂ ಪುರ್ಸೊತ್ತಿಲ್ಲದವಂತೆ ಈಗ ಪುರ್ಸೊತ್ತುಲಿ ಎಂತ ಮಾಡೊಕುತ ಗೊತ್ತಾಗ್ತಿಲ್ಲೆ!! ಕುದ್ದ್ ಕಾಲಹರಣ ಮಾಡ್ವ ಜಾಯಮಾನದವಲ್ಲ ನಮ್ ಅಣ್ಣು ಹೈದ. ಬೆಂಗ್ಳೂರ್‌ಲೇ ಇರವ್ಕೆ ನಮ್ಮ ಊರುನ ಬಿಸ್‌ಲ್ ನೋಡ್ರೆ ಎಷ್ಟ್  ಬಂಗ ಅದೆನೋ ಅಷ್ಟೇ ಕುಸಿನೂ ಅದೆ. ಏಕೆ ಗೊತ್ತುಟಾ? ಹಪ್ಪಳ ಒತ್ತಿರೆ ಹಿಂಬತೊಳಗೆ ಒಣ್ಣಿದ್ ಆತ್ (ಬೆಂಗ್ಳೂರ್‌ಲಿ ಅದರ ಬಂಗ ಯಾಕೇಂತ ಕೇಳ್ರೆ... ಮೂರ್ ಮೂರ್ ದಿನ ಬೇಕು ಹಪ್ಪಳ, ಸಂಡಿಗೆ ಒಣ್ಗಿಕೆ, ಅದೂ ಒತ್ತಿದವನ ದೆಸೆ ಸೆರಿ ಇದ್ದ್ ಮೋಡ ಇಲ್ಲದಿದ್ದರೆ!!) ಹಂಗೇ ಹತ್ತ್ ಕಟ್ಟ್ ಹಪ್ಪಳ, ತರಾವರಿ ಸೆಂಡಿಗೆಗಳೂ ಅದೊ. ಇನ್ನ್ ಹಲ್ಸಿನ ಕಾಯಿಗೆ ಬರ ಎಲ್ಯುಟ್ಟು? ಕಾಯಿ ತೋಳೆನ 'ಚಿಪ್ಪುಸು' ಮಾಡಿ ಕುಪ್ಪಿ ಕುಪ್ಪಿ ತುಂಬುಸಿಸಿನೂ ಆತ್. ಆದರೂ ಮನ್ಸ್ ಮಾತ್ರ ಮಣ್‌ಂಬೆ ಎದ್ರ್ ಸಿದ ಅಳ್‌ಂಜೆನಾಂಗಾಕೆ ಕಾರಣ ಊರ್ ಬೈಲ್ ಹೈದನ ಪದ್ಯದ ಆ ಸಾಲ್!! "ಹಸ್ರಿದ್ದ ಗದ್ದೆ ಎಲ್ಲ ಹಡ್ಲಾಗಿ ಬಿದ್ದುಟು ಅಪ್ಪ ಹೊಡುವ ದೆನಿ ಈಗ ಸೆಡ್ಲಾಗುಟೂ..." ಚೋಡಿಂದಾಚೆ ಮೂಲೆಲಿದ್ದ ಮಜಲ್ ಗದ್ದೆ ಬೇಸಾಯ ಬುಟ್ಟ್‌ದ್ ಹಡ್ಲ್‌ಗದ್ದೆ ಆಗಿ ವರ್ಸ ಹತ್ತ್–ಹದ್ನೈದರ ಮೇಲೇ ಆಗಿರ್ದು. ಈ ಕೊರೋನ ಅಂತೂ ಬೇಗ ಮುಗಿವ ಲಕ್ಷಣಗಳೇ ಕಾಂಬೊಲ್ಲೆ. ಬೇಸಾಯ ಏಕೆ ಸುರು ಮಾಡಿಕೆ ಬೊತ್ತ್?? ಆದರೆ ಹೂಡಿಕೆ ಗೊತ್ತಿದ್ದವು ಯಾರೊಳೊ? ಇಂದ್‌ನವು ಹೂಡ್ರೆ ನೆರೆ ಹುಡ್ಕಿರೆ ಕಾಡಂದಿ ಚುಕ್ಕಿದಾಂಗಿರ್ದು!! ನಾಕ್ ಕಡೆ ವಿಚಾರ್ಸಿಕಾಕನ ಟ್ರಾಕ್ಟರ್ ಹೊಡ್ದ್ ಹೂಟೆ ಮಾಡಿ ಕೊಟ್ಟವೆತ ಗೊತ್ತಾತ್. ಅವರೊಟ್ಟಿಗೆ ಹೂಡಿ ಮಾಡ್ಸಿ ಪುಣಿ ಕಟ್ಟಿದ್ ನೇಜಿ ನೆಟ್ಟಾತ್. ಒಂದ್‌ಕರೆ ಪಾಲ್‌ಗೆ ನೇಜಿ ಎತ್ತದೆ ಪುಂಡಿ ಬಿತ್ತಿದೂ

ಆತ್. ಇತ್ತ ಅಣ್ಣುನ ಹೆಣ್ಣ್ ಏನ್ ಕಮ್ಮಿನ ಗಿರಾಕಿ ಅಲ್ಲ. ಬೆಂಗ್ಳೂರ್‌ಲಿ ಹೂಂದ್ರೈ ಚಟ್ಟಿಲಿ ಬಟಾಟೆ ಬೆಳ್ಳಿಕಂಬ ಅಳ್. ಇನ್ನ್ ಕೇಳೊಕಾ? ಮನೆ ಸುತ್ತ ನೆಟ್ಟಿಕಾಯಿ ಮಾಡಿ ತುಂಬುಸಿ, ಕಳ್ದ ತಿಂಗ ಅಂಗ್‌ಡಿಂದ ತಂದದ್ ನೀರುಳ್ಳಿ, ಬೆಳ್ಳುಳ್ಳಿ ಮಾತ್ರ!!

ಹಡ್ಲ್ ಬಿದ್ದ ಗದ್ದೆಲಿ ಬೇಸಾಯ ಏನೋ ಆತ್... ಆದರೆ ಬೊಡ್ಕ್, ಬಾಸೆನ ಬೇಸಾಯಕ್ಕೆ ಪುಂಡಿ ಬಿತ್ತಿದ್ ಅಣ್ಣುನ ಮಂಜ ಕಾರ್ತಿ. ಯಾಗ ನೋಡ್ರೊ ಇಂಗ್ಲೀಷ್‌ಲಿ ಕನ್ನಡ ಮಾತಾಡ್ತಿದ್ದಂವ (ಅದ್ ಬೆಂಗ್ಳೂರ್ ಕನ್ನಡ ನೋಡಿ. ಹೆತ್ತ್‌ಪದದ ಕನ್ನಡದ ಒಂದ್ ವಾಕ್ಯಲಿ ಕಮ್ಮಿಂತೇಳ್ರೂ ಐದಾರ್ ಪದಗ ಇಂಗ್ಲೀಷ್!!) ಈಗ ಅರೆಬಾಸೆಲಿ ಮಾತಾಡ್ತುಟ್ಟು!! ಆಗ ಹೊಳ್ತ್ ಅಣ್ಣುಗೆ, ಮೊನ್ನೆ ಪೇಟೆ ಬೊಡ್ಕ್‌ತ ಐಸಿರದ ಹಿಂದೆಕಂಡೆ ಹೋತುಟ್ಟು. ಈಗ ಕಳ್ಳಂದದರೆಲ್ಲಾ ಪುನಃ ತಾಕೆ ಇದ್ವೇ ಒಳ್ಳೆ ಸಮಯ. ನಮ್ಮ ಮಕ್ಕಳೊ ಹಿಂದೆಲ್ಲಾ ಗೋಡೆಲಿ ಗೀಚ್ ತಿದ್ದರೆ ಇಂದೆಲ್ಲಾ ಮೊಬೈಲ್‌ಲಿ ಗೀಚ್ ತೊಳೊ. ಅದೂ ಅಲ್ಲದೆ ಈ ಇಂಟರ್ನೆಟ್, ಪೇಸ್ಬುಕ್, ವಾಟ್ಸಾಪ್ ತ ಬಂದ್ ಎಲ್ಲೆಲ್ಲೋ ಇರವೆಲ್ಲಾ ಕಣ್ಣೆದ್ರೇ ಕುದ್ದ್ ಮಾತಾಡುವೆ. ಹಂಗಿರ್ಕಾಕನ ಬಾಸೆನ ಒಳ್ಸಿಕೂ ಏನಾರ್ ಮಾಡೊಕಲ್ಲಾ?? ನನ್ನ ಮಂಜ ಮನೆಲಿದ್ದರ್‌ಂದ ಇಂದ್ ಅರೆಬಾಸೆ ಕಲ್ತತ್. ಹಿಂಗೇ ಬಂಗ ಬರವು ಇನ್ನೂ ಅದೆಷ್ಟೋ ಜನಂಗ ಒಳೊ. ಮಂಜನ ಶಾಲೆನ ಕ್ಲಾಸ್ ಮೊಬೈಲ್ ಆನ್ಲೈನ್ ಆಕನ ಅದೇ ತರ ಬಾಸೆ ಏಕೆ ಕಲ್ಸಿಕೆ ಬೊತ್ತ್?? ಹಂಗೇ ಬಾಸೆ ಕಲ್ಸಿಕೆ “ಬನ್ನಿ... ಅರೆಬಾಸೆ ಕಲ್ಯೊಮೊತ ಕ್ಲಾಸೂ ಆತ್... ಅಷ್ಟ್ ಮಾತ್ರನಾ...ಪೇಸ್ಬುಕ್‌ಲಿ ಅರೆಬಾಸೆ ಪದ್ಯಗ... ಕತೆಗ... ಕವಿಗೋಷ್ಠಿ... ತಿನ್ಸ್ ಕೂಟ... ಬಾಸೆ ಹಬ್ಬ.... ವೀಡಿಯೋಗ... ಒಂದಾ ಎರ್ಡಾ... ದಿನಕ್ಕೊಂದೊಂದು ಬಗೆ... ಒಟ್ಟಾರೆ ಈ ಲಾಕ್‌ಡೌನ್ ಎಲ್ಲವ್ಕೆ ಸೊಂಟಕ್ಕೆ ಕಲ್ಲ್ ಕಟ್ಟಿ ಹಳ್ಳಕಾಕಿದಾಂಗಾದರೆ ಅರೆಬಾಸೆಗೆ ಮಾತ್ರ ಬುಗ್ಗೆ ಕಟ್ಟಿ ಹಾರ್ಸಿದಾಂಗಾದ್ ಸುಳ್ಳಲ್ಲ!!

ಯಾಗ ನೋಡ್ರೂ ಕಾಲ್‌ಗೆ ಚಕ್ರಕಟ್ಟಿಕಂಡೇ ಇರ್ವ ಮಂಜ ಅಣ್ಣು ಈ ಸರ್ತಿ ಮಾಡ್ವ ಕೆಲ್ಸಗಳ ನೋಡ್ರೆ ಅಪ್ಪಂಗೆ ಎಲ್ಲಾ ಚಿತ್ರವಿಚಿತ್ರ ಆಗಿ ಕಂಡದೆ. ಒಟ್ಟಿಗೆ ಮನ್ಸೊಳಗೆ ಕುಸಿನೂ ಉಟ್ಟು. ಒಂದಿನ ಬೊಳ್ಪುನ ಚಾಯದ ನೀರ್ದೋಸೆನೂ ಕಾಯಿಬೆಲ್ಲನೂ ತಿಂಬಕೆ ಕುದ್ದವ್ಕೆ ಕೇಳಿಯೇ ಹೋತ್... “ಅಲ್ಲನೇ ಅಣ್ಣು... ಅಂದೆಲ್ಲಾ ನಿಂಗೆ ಊರುಗೆ ಬಂದರೆ ಉಂಡದ್ ಅರ್ಗಿಕೆ ಪುರ್ಸೊತ್ತಿರ್ತಿಲ್ಲೆ. ಈಗ ಏನೇನೋ ಹೊಸ ಹೊಸ ಬರೆ ಮಾಡ್ತೊಳ. ಏನಾತ್‌ನೆ ನಿಂಗೆ? ಕೆಲ್ಸಲಿ ಏನಾರ್ ಟೆನ್ಷನ್ ಸುರಾತಾ

ಹೆಂಗೆ? ಕಣಿಯನಕ್ಕಲೆ ಮನಿ ಹೋಕಾ ನೂಲ್ ಮೊಂತ್ರ್ ಸಿಕೆ?"ತ ಜೋರ್ ನೆಗಾಡ್ದೋ... ಆಗ ಅಣ್ಣು "ಅಪ್ಪಾ... ಬೆಂಗ್ಳೂರ್‌ಲಿ ಇರ್ಕಾಕನ ಆಫೀಸ್, ಮನೆ, ಕೆಲ್ಸ ಅದೇ ಬೊದ್ಕ್‌ತ ತಿಳ್ಕಂಡಿದ್ದೆ. ಒಂದ್ ದಿನ ಇರದಿದ್ದರೆ ಲೋಕನೇ ಮುಳ್ಗ್ಯೋತ್‌ತ ನೆನ್ಸಿಕಣ್ತಿದ್ದೊ. ಇಂದ್ ನೋಡಿ. ಊರುಗೂರೇ ಬಾಗ್ ಲಾಕಿ ಮಲ್ಗಿರೂ ಏನೂ ಲೋಕ ಮುಳ್ಗಿತ್ಲೆ!! ಮೊನ್ನ ಮೇಲೆ ಬಂದಾಗೆ ಮನೆ ಮಾಡ್ ಕುಬೊಳುನ ನೋಡಿ ಬಾರೀ ಲಾಯ್ದುಟ್ಟುತ ಹೇಳಿಕೆ ಹೊರ್ಟದೇ ಬುಟ್ಟ್ ಕಲ್ಸಿದ್ ಕಟ್ಟಿದ ದಳನ ಮನ್ಸ್ ಲೇ ಇಸಿಕಂಡತ್ಲೆ... ಗೋಡೆ ಜರ್ದರೆ ಮಾತ್ರ ಅದರ ನೆಂಪಾದು!! ಹಂಗಾಗುಟು ಇಂದ್‌ನ ಬೊದ್ಕ್. ಹಿಂದೆಲ್ಲಾ ಮನೆಗೆ ಬಾಕನ ನೀರ್ ಚೊಂಬ್ ತಾತಿದ್ದೊ. ಊರಿಡೀ ಸುತ್ತಿ ಬಂದವ ಕೈ ಕಾಲ್ ತೊಳ್ದ್ ಮನೆಗೆ ಹತ್ತೊಕುತ. ಅದ್ ಕೊಡಿ ಬೆರ್ಳ್ ಕಂತ್‌ಸಿ, ಮುಟ್ಟಿ ಕೈ ಮುಕ್ಕಂಬ ಪದ್ಧತಿಗೆ ಬಂದೆತ್ತಿತ್. ಆದರೆ ಕೈಕಾಲ್ ತೋಳ್ದೇ ಬರೊಕುತ ತಿಳ್ಸಿಕೆ ಕೊರೋನನೆ ಬರಕಾತ್. ಬುಡಿ... ಹಿಂದೆಲ್ಲಾ ತೊಟಗಿಲ್ ಸುತ್ತ ಕಿನ್ನಿರಿ ಬೊಳ್ಳಿ ಸುತ್ತಿದ್ದದ್ ಎಂತಕೆ? ಅದರ್ಲಿ ಸಣ್ಣ ಸಣ್ಣ ಮುಳ್ಳುಗ ಒಳೊಲ್ಲಾ? ಕೂಸ್ ಎದ್ದೆ ಕುದ್ದರೆ ರಪಕ್ಕತ ಹೊರ್ಡಿಕೆ ಬೊತ್ತ್‌ತ. (ದೃಷ್ಟಿಗೂ ಅದುವೇ) ಹೊರ್ಟರೆ ಮುಳ್ಳು ಕಂತುದು ನೋಡಿ. ಹಂಗೇ ಹೊರಗೆನವೂ ಹೋಗಿ ಒಮ್ಮೆಗೆ ಕೂಸುನ ಎತ್ತಿಕೆ ಆದುಲೆ. ಆದರೆ ತೊಟಗಿಲ್ ದಾಟಿದ ಕೂಸುಗೆ ಒಂದಲ್ಲಾ ಒಂದ್ ಉಪದ್ರಗ ಇದ್ದೇ ಇದ್ದದೆ. ಹಿಂಗೆ ನಾವು ನಮ್ಮ ಸುತ್ತ ಇದ್ದ ಕಿನ್ನಿರಿ ಬೊಳ್ಳಿನ ಕಡ್ದಾಕಿ ಹೊರ್ಟಿದ್ದೊ. ಬಗೆ ಬಗೆ ಕಾಯಿಲೆಗ ಬಂದೊ, ಗುಡ್ಡೆಗ ಬಿರ್ದೊ, ನಮ್ಮೊಟ್ಟಿಗಿದ್ದ ಸಂಸ್ಕೃತಿ ಪದ್ಧತಿನ ಮತ್ತೋರ್ಗಿದ್ದೊ. ಮನೆಲೇ ಮೂರ್ ದಿನ ಮಾಡ್ತಿದ್ದ ಮೊದ್ವೆಗ ಲಕ್ಷಗಟ್ಲೆ ಕೆರ್ಚ್‌ಲಿ ಒಂದಿನಲಿ ಮುಗ್ಸ್ತಿದ್ದೊ. ಇದೆಲ್ಲದರ ಸರಿಮಾಡಿಕೆ ಆ ಮಾಯೆನ ಒಂದ್ ಆಟ ಅಪ್ಪಾ ಇದ್. ಇನ್ನೂ ಸರಿಮಾಡಿಕಣದಿದ್ದರೆ ಇನ್ನ್ಯಾಗ? ಬೊದ್ಕ್‌ಗೆ ಬೆಂಗ್ಳೂರ್ಲೆ ಇರೊಕುತಿಲ್ಲೆ. ಇಲ್ಲಿ ಇದ್ದರೂ ಜೀವನ ಸಾಗ್ ಸಕ್‌ತ ಗೊತ್ತಾತ. ನೀವೇ ಹೇಳ್ಯಳರಿ ಅಲ್ಲಾ.. ತಲೆ ಇದ್ದರೆ ಎಲೆ ಮಾರಿ ಬೊದ್ಕೆಕ್‌ತ" ನೆಗಾಡ್ತಾ ಕೈಲಿದ್ದ ಕೀಂತ್ ಬಾಳೆಗೆ ಕಾಯಿ ಬೆಲ್ಲ ಹಾಕ್ಯಂಬಕೆ ಹೋತ್. ಮಂಜನ ಮಾತ್‌ಗೆ ಹೂಂಗುಡ್ತಾ ಅಪ್ಪ ದ್ಯಾಪಣ್ಣಂನೂ ಬೊಳ್ದುಗೆ ಮುಡ್ದುಗಿಸಿದ ದೀಪನ ನೆಂಪುಸಿಕಂಡ್ ಮನ್ಸ್‌ಲೇ ಕೈ ಮುಕ್ಕಂಡೊ.

**(ಅರೆಭಾಷೆ ಕತೆ ಸ್ಪರ್ಧೆಲಿ ಮೊದಲ ಬಹುಮಾನ ಪುರಸ್ಕೃತ)**

**ಡಾ. ಪುನೀತ್ ರಾಘವೇಂದ್ರ ಕುಂಟುಕಾಡು**
ಮೊಬೈಲ್ : 9901722763

# ಕತೆ ಹೇಳಂವನೆ ಕತೆ ಆಕನ



**ಕಾರ್ತಿಕ್ ಪದೇಲ**

ಹದ್ನೆಂಟಿಪ್ತ್ವರ್ಸದ ಹಿಂದೆನ ಸಂಗತಿ. ಐದಾ.. ಆರ ವರ್ಸ ಆಗಿರ್ದೇನೊ ನಂಗೆ.. ಊರ್ಲಿ ಎಲ್ಲ ಕಡೆ ಆಗ ಮುಳಿಹುಲ್ಲು ತಪ್ಪಿರೆ ನೊಡು ನೊಡುಲಿ ಹಂಚಿನ ಮನೆಗ ಮಾತ್ರ ಇದ್ದದ್.

ಕಾಂಕ್ರಿಟ್ನ ಮನೆಗೆಲ್ಲ ಹಂಗೆ ಮಾಡ್ದು ಗಡ ಹಿಂಗೆ ಮಾಡ್ದುಗಡ ಅದರ ಮಾಡ್ರೆ ವರ್ಸ ವರ್ಸಕು ಬೊಳು ಗಟ್ಟಿ ಮಾಡ್ವಕೆಲ್ಸ ಇಲ್ಲೆಗಡಂತ ಕಾಂಕ್ರಿಟ್ಮನೆಗೆ ಕೊದಿ ಬುಡುವ ಕಾಲ. ನಾವ್ಗೆಲ್ಲ ಟೆರೆಸ್ಮನೆಗೆಲ್ಲ ಕಾಂಬೊದೆ ಅಪ್ರುಪ.. ಸುಳ್ಯ, ಸುಬ್ರಹ್ಮಣ್ಯಲಿ ನಾಕೈದ್ನೋಡಿರ್ವ.

ಮಂಗ್ಳೂರ್ಬೆಂಗ್ಳೂ ಹೋರ್ದವಲ್ಲ ಸುಳ್ಯದೊಳಗಸ್ಟೆ ನಮ್ಮ ಬಾಮಿ...! ಆಗಳೆ ನಮ್ಮ ಸೋರುವ ಮಾಡ್ನ ತಟಪಟ ಹನಿಯಪ್ಪಂಗೆ ಹೆದ್ರಿ ಟೆರೆಸ್ಮನೆಗೆ ಆಸೆ ಮಾಡ್ತಿದ್ದದಿನಗ.

ನಂಗೆ ಅದ್ಸೆರಿ ನೆಂಪುಟ್ಟು ಅಪ್ಪ ಏನಾರ್ಲಗಲಿ ಸಾಲೊನ ಮೂಲೊನ

ಒಂದ್ಮನೆ ಕಟ್ಟುದ್ಕಟ್ಟುದೆಂತೇಳಿ ಮನ್ಸ್ಮಾಡಿ ನಮ್ಮಜ್ಜನೆ ಒಳ್ಳೆ ಮೂರ್ತ ಇಸಿ ನಮ್ಮ ನಕ್ಸತ್ರ, ರಾಸಿ, ಆಯ, ಗಣಕೋಲ್ಲೂಡ್ಸಿಕಲ್ದ್ ಎಲ್ಲ ನೋಡಿ ಕುಟ್ಟಿ ಹಾಕಿಯೇ ಬುಟ್ಟೊ.

ಹಂಗೆ ಮನೆಕಟ್ಟುವ ಕೆಲ್ಸ ಸುರು ಆತ್, ಆಗಳೆ ಬಂದದ್ನಾ ಈಗ ಹೇಳಿಕೆ ಹೊರ್ಟ ಗಂಗನು, ರಂಗನು ಇಬ್ಬೊರು ಪ್ರಾಯದ ಹುಡ್ಗಗ್ರ್ಂಗ ಮೇಸ್ತ್ರಿಯಾರ್, ರಂಗ ಅವನ ಹೆಲ್ಪರ್.

ಇಬ್ಬೊರ್ಸುಳ್ಯದವೆ ಕಾಗಡೆ, ಮೇಗಡೆ ಮನೆವು ಬಾರಿ ದೋಸ್ತಿಗ.. ಎಸ್ಟ್ದೋಸ್ತಿಗತೇಳ್ರೆ ಉಟ್ಟೊಲ; ಸಮ್ಮಂದಗಳ ಅವರ ನೋಡಿ ಕಲೆಕು, ಹಿರ್ಯೊರ್ವು ಹೇಳ್ವಾಂಗೆ ಕುಲ್ಕುಂದದ ಜಾತ್ರೆಲಿ ಕುಡ ಸಿಕ್ಕಿಕಿಲೆ.

ತಿಂಬೊದುಂಬೊದ್ಬುಡಿ.., ಬಾಮಿಕಟ್ಟೆಲಿ ಒಬ್ಬ ಬಾಮಿಂದ ನೀರ್ಎಳ್ಕೊಡಿಕೆ; ಇನ್ನೊಬ್ಬ ಮೀಯಕೆ ಒಬ್ಬಂಗೆ ಆದಾಂಗೆ ಇನ್ನೊಬ್ಬಂಗೆ ಪಗರಲಿ ಎಳ್ಕೊಡಿಕೆ.. ಅಂತ ದೋಸ್ತಿಗ.; ಕೆಲ್ಸಲಿ ಮಾತಿಲ್ಲೆ., ಬೊಳ್ಪುಂದ ಹಿಂಬೊತ್ತೊರಗೆ ರಣ ಕಟ್ಟಿಗ್ಯೆಯ್ಯತಿದ್ದ. ಕಣ್ಣೊಜ್ಜಿಗಂತು ಅಲ್ಲನೆ ಅಲ್ಲ.

ಹಿಂಬೊತಾಕನ ಹೊತ್ತುಳ್ಂಗಿ ದಾಂಗೆ ಗಡ್ಜಕ್ಕಲೆ ಹೋಗಿ ಲೆಕ್ಕದೆ ಎರ್ಡ್ಜಕ್ಕಳ ಹೆಂಡ ಮೂಸಿ ಬರ್ತಿದ್ದ..

ಇರ್ಲ್ ಒಮ್ಮೊಮ್ಮೆ ಲೈಟ್ಹೋದು, ಗಾಳ, ಬಲೆ, ಮಳೆಬಾಕನ ಎಸ್ಂಡ್ಕಡೆ ಕೋದು ಇದೆಲ್ಲ ಗಂಗನ ಪ್ರೊಲ್ಸ್, ಅಸ್ಟಿರ್ಸ ಅದರ್ಲೆಲ್ಲ..

ರಂಗ ಕತೆ, ಕಾದಂಬರಿ, ಸಾಹಿತ್ಯಲಿ ಆಸಕ್ತಿ ಜಾಸ್ತಿ...

ಮದ್ಯಾನ ಉಂಡ ಮೇಲೆ ಅವರ ಬೊಚ್ಚೆಲ್ತ್ಗೆ ಕೆಮಲ್ಗು ಕನಮತೆ ರಾತ್ರೆ ನಿಲ್ಗಿಕೆ ಮುಂದೆ ಅಜ್ಜಿಕತೆಗಳ ಹೇಳ್ತಿತ್ಸಣ್ಣಿತೆರ್ಲಿ..

ಅವರ್ಂದ ಉಪಕಾರಲ್ಲದೆ, ಉಪದ್ರಯಿತ್ಲೆ..

ಗಂಗ ಬಾರಿ ಪೊರ್ಲುನ ಹೈದ.. ಅವನಪ್ಪ ತೀರಿಹೋಗಿದ್ದ ಅಯ್ಯೆ ಮಾತ್ರ ಇರ್ದು.., ಮೂರ್ಅಕ್ಕಂದರ ಇವನೆ ಗೈದ್ಮೊದ್ವೆ ಮಾಡ್ಸಿಕೊಂವನುತಂಗೆನು ಮೊದ್ವೆ ಆಕೆ ಬಾಕಿ ಒಳದ್... ಮೂರ್ಜನರ ಮೊದ್ವೆ ಮಾಡಿಕೊಟ್ಟೇ ಸಾಕಾಗಿ... ನಂದು ತಂಗೆದು ಒಟ್ಟಿಗೆ ಆಕಸ್ಟೇಂತ ಹೇಳ್ತಿತ್ತ್.

ಹೀಂಗೆ ಯೋಗ ಕೂಡಿ ಬಾಕನ ಇವಂಗು ಒಂದ್ಹೂಡೆ ನಿಘಂಟಾಗಿ ತಂಗೆಗೂ ಒಂದ್ಹೈದ ನೋಡಿ ಆಗಿತ್ತ್.. ಇದೆಲ್ಲಾ ಆಕಂಡಿರ್ಕನನೆ

ಹಾಂಗೂ ಹೀಂಗೂ ನಮ್ಮ ಮನೆ ಕೆಲ್ಸೆಲ್ಲ ಮಕ್ಕುಲುನೂ ಆತ್...

ಅಂದ ಮೇಲೆಟಕ್ಕನುಟಿಕ್ಕಿನು ಅವರ ಕೆಲ್ಸ ಹುಡ್ಕಂಡ್ಬೇರೆ ಕಡೆ ಹೋದ ...

* * *

ಅದೆಲ್ಲ ಕಳ್ಡತ್ತನೆರ್ಡ್ವರ್ಸ ಕಳ್ದಿರ್ದುನಾ ಆಗ ಹತ್ನೆ ಕ್ಲಾಸ್ಲಿದ್ದೆ ಕಂಡದೆ... ಅಂಪ್ಪನು ನಾನು ಸುಳ್ಯಲಿ ಯಾವ್ದೋ ಮೊದ್ವೆಗೆ ಹೋಗಿಬಾಕನ ನಮ್ಮ ಮನೆ ಕಟ್ಟಿದ ಹಳೆ ಇಂಜಿನೇರ್ಸಿಕ್ಕಿದ.. ಅಪ್ಪ ಕಸ್ಟಸುಖ ಎಲ್ಲ ಮಾತಾಡಿ ಗಂಗ–ರಂಗ ಹೇಂಗೊಳ ಕೇಳ್ದ..ರಪ್ಪ ಇಂಜಿನೇರ್ರ ಮೋರೆ ಕುಂಞಿ ಕುಂಞಾತ್ಯ್ತ್.. ನೀವ್ಗೆ ವಿಸಯ ಗೊತಾತ್ಲೆನಣ್ಣಾ ಗಂಗ ಪಾಪ ಅವನ ಮೊದ್ವೆಗೆ ಒಂದ್..; ಒಂದ್ವಾರ ಇರಿಕನ ಹಾರ್ಟ್ಫೈಲಾಗಿ ತೀರಿಹೋತಣ್ಣ... ಇಸ್ಟಣ್ಣ ಪ್ರಾಯಲಿ ಹಿಂಗೆ ಆಕೆ ಬೊತ್ತಿತ್ತಪ, ಪಾಪ ಅವನ ಅಯ್ಯೆನು ತಂಗೆ ಮರ್ಡುದು ನೋಡ್ಯೆನಂಗೆ ಸಾಕಾವ್ಟಣ್ಣ, ಅಷ್ಟಲ್ಲದೆ ಗಂಗನ ದೋಸ್ತಿ ರಂಗಂಗೆ ಇಂವ ತೀರಿಹೋದ ಸುದ್ದಿ ಕೇಳಿ ತಲೆಗೆಡ್ಡಿಗವನು ಒಂತರ ಮಾನಸಿಕದವನಾಂಗವ್ಟು.. ಏನ್ಮಾಡಿಕಾದೆ ಗ್ರಾಚರ, ಪಾಪಅವನ ಮನೆವು ನೆಂಟ್ರೆಲ್ಲ ಸೇರಿ ಆಸ್ಪತ್ರೆಗೆ ಸೇರ್ಸಿದ..ಆದೊರು ಏನ್ಪೋಜನಿಲ್ಲೆ, ಅಂವ ಆಸ್ಪತ್ರೆಂದ ತಪ್ಪುಸಿಕಣ್ತ್.. ಹಂಗೆ ತಪ್ಪುಸಿ ಕಂಡ್ಸುಳ್ಯ ಪೇಟೆಲಿ ಅಲ್ಲಿ ಇಲ್ಲಿ ತಿರ್ಗಿದೆಂತೇಳ್ದ...

ಗಂಗ ತೀರಿಹೋದ್ತೇಳ್ಕನನೆ ತಲೆಗೆ ಮರ ಬಿದ್ದಾಂಗಾಗಿತ್ತ್. ಇನ್ನಂಗಂಗು ಹಿಂಗ್ಯಾತ್‌ಂತತಿಳ್ಡಂಗೆನೆ ಒಂದ್ನಮುನೆ ಹುಚ್ಚಿಡ್ದಾಂಗೆ ಆತ್..!

ಆ ದಿನ ಅವರಿಬ್ಬರನೆನ್ಸಿಕಂಸ್ಟರ್ಟಿವೆರ್ಂತನಂಗೇ ಗೊತ್ಲೆ....!

* * *

ಅದಾಗಿ ಇರಡ್ವರ್ಸ ಕಳ್ದಿರ್ದು,

ಆಗ ಪಿಯುಸಿಲಿ ಇದ್ದೆ ಆಗಿರೊಕು..?

ಹಿಂಬೊತು ಕೆಲ್ಸಮುಗ್ಸಿ ಬರ್ವ ಅಕ್ಕನ ಕರ್ಕಂಡೋಕೆ ಬಸ್ಟಾಂಡ್ಲಿ ಬಸ್ಸಿಗೆ ಕಾಯ್ತಾಯಿದ್ದೆ.

ಹಇನ್ಲೊತ್ತುಲಿಬಸ್ಟಾತ್, ಅಕ್ಕ ಬಸ್ಸಂದಿಳ್ಟಂದ್ಯೆಕ್ಷತ್ತೊಕಸ್ಟೆ., ಅಸ್ಟೊತ್ತಿಗೆನೆ ಒಬ್ಬ ಮೊಣ್ಣಾದ ಹರ್ದ ಬಟ್ಟೆ ಹಾಕಂಡ್, ಕೂದಲ್ಗಡ್ಡೆಲ್ಲ ಉದ್ದ ಉದ್ದ ಬುಟ್ಕಂಡ್ನಮ್ಮ ಚೆಲುವಿನ ಚಿತ್ತಾರಲಿ ಬರುವ ಮಾದೆಸಂತೇಳ್ವ ಹುಚ್ಚನಾಂಗೆ ಇದ್ದಂವ ಬೈದ್ಕಂದ್ನಿತ್ತನ್ನ ಮೋರೆನನೆ ನೋಡಿಕೆ ಸುರು ಮಾಡ್ತ್.,

ನಂಗೇಕೊ ಅಸ್ಜನರನೊಡುಲಿ ಒಮ್ಮೆ ನಾಮತ್..

ಅಕ್ಕನನ್ನ ತಲೆಗೆ ಹಿಂದೆಂದ ಕುಟ್ಟಿಯಾರ್ಯಾರ್ಂತೇಳುವಾಂಗೆ ನನ್ನ ಮೋರೆನೆ ನೋಡ್ತ್...

ಅಂವ ಬೈಕ್‍ಂದ ಒಸಿ ಹಿಂದೆ ಹೋಗಿ ಸೊಂಟಕೆ ಕೈಹಿಡ್ಡಿತ್ತನ್ನ ನೋಡಿ

"ಓಸ್ಟೊಡ್ಡಂವ ಆಗಳಯನೀ, ನಿನ್ನೆ ಮೊನ್ನೆ ಇಸ್ಟೇ ಎತ್ತರ ಇದ್ದ" ಅಂತೇಳಿ ಕೈಬಾಸೆಲೇ ನನ್ನ ಹೊಗ್ಳಿಕೆ ಸುರುಮಾಡ್ತ್..

ನಂಗೆ ಇಂವಯಾರ್ಮಾರ್ರೆ ನನ್ನ ಬಾರಿ ದೊಡ್ಡ ದೋಸ್ತಿನಾಂಗೆ ಮಾತಾಡ್ದೆಲಂತೇಳಿ ತಲೆಹುಚ್ಚಿ ಹಿಡ್ದಾಂಗೆ ಆತ್..

ಅಕ್ಕ; ನನ್ನೊಮ್ಮೆ ನೋಡಿ ನಿಂಗೆ ದಾರಿಲಿ ಹೋಗ್ವಬರ್ವ ಹುಚ್ಚ ಕೂಡ ನಿನ್ನ ದೋಸ್ತಿಗಳೆ ಮಾರಯಂತೇಳಿ ಸಿಟ್ಟುಲಿ ಕಣ್ಣೊಡ್ಡಿಸ್ತ್..

ನಂಗೆ ಹುಚ್ಚಿ ಹಿಡೆಕೊಂದೆ ಬಾಕಿ.

"ನೀಯಾರ್ಮಾರಯ, ನನ್ನ ಹೇಂಗೆ ಗೊತ್ತಿಂಗೆಂತ ಕೇಳಿ ಬುಟ್ಟೆ"..

ಅಂವನನ್ನೊಮ್ಮೆ ಸಿಟ್ಟುಲಿ ನೋಡಿ...

"ಓಯ್ಗಂಗ ಹೋತ್ನಿಂಗೆ ಗೊತ್ಲೆನ..?

ಇನ್ನಿರ್ದುನಾ ಒಬ್ಬನೆ ಹೋಕೆ.. ನಾನು ಸದ್ಯಲೆ ಹೋನೆಂತೇಳಿ ಕಂಡ್" ಜೋರ್ನಗಡಿಷ, ಮೋರೆಗೆ ಕೈ ಅಡ್ಡಹಿಡ್ಕಂಡ್ಮಕ್ಕಳಾಂಗೆ ದುಕ್ಕುಡ್ಸಿಮರ್ದಿ ಕೆಸುರು ಮಾಡ್ತ್

ದೇವ್ರೆ.., ನಂಗೆ ಆಗ ಒಸಿಒಸಿ ಅರ್ತಾಗಿ,

ಅದೇ ರಂಗ ಅಲಾ ಇದ್..?

ಛ್ಚೇ... ಆಗನ ಅಸ್ಟೊಲ್ರುನ ಹೈದ ರಂಗ ಎಲ್ಲಿ, ಗಡ್ಡ, ಕೂದಲ್ಬುಟ್ಟ್ ಸಾಯಕೆ ಬಿದ್ದ ಇಂವ ಎಲ್ಲಿ..

ಏನ್ಮಾಡ್ದು ಕೈಲಿದ್ದ ಚಿಲ್ಲರೆ 300 ರುಪಾಯಿ ಅಂವನ ಕೈಗೆ ಕೊಟ್ಟು ಸೀದಾ ಮನೆಗೆ ಬಂದೆ....

* * *

ಇತ್ತೀಚೆಗೆ... ಮಂಗ್ಳೂರ್ಲಿ ನಮ್ಮ ಕೆಲ್ಸನೆ ಹಂಗೆ,

ಮಾಮೂಲಿ ಸೋಮವಾರದಾಂಗೆ ತಡಾಗಿ ಅಂಸರಲಿ ಬೈಕ್ಸ್ಟಾರ್ಟ್ಮಾಡಿ ಮಂಗಳದೇವಿ ಕಡೆ ಹೋಗ್ತಿದ್ದೆ... ಅಲ್ಲೇ ಒಂದ್ರೈಲ್ವೇ ಬ್ರಿಡ್ಜರೆಲಿ ಕಟ್ಟೆಲಿ

ಕುದ್ದವಂಗೊಬ್ಬಂಗೆ ಸಣ್ಣ ಮಕ್ಕಕಲ್ಶಿಸಾಡ್ತಿದ್ದ.. ನಾ ಬೈಸಿಕಲ್ ನಿದಾನ ಮಾಡಿ ಮಕ್ಕಳ ಜೋರ್ಮಾಡಿ ಓಡ್ಸಿದೆ.

ಅವನ ಉದ್ದ ಕೂದಲುಟ್ರಾಸಿ ಇರ್ವ ಗಡ್ಡ, ಮಾಡುವ ಕೋಲ ನೋಡ್ರೆ ಮೊರ್ಲ ರಾಂಗೆ ಕಾಣ್ತಿತ್ತ್... ನನ್ನ ನೋಡಿ ಮಕ್ಕಳ ಬೆರ್ಸಿದಕ್ಕಾಗಿ ಕೈಮುಗ್ತ್..

ನಂಗೆ ಕೆಲ್ಸಕೆ ತಡಾದರ್ಂದ ಅಂಬೆರ್ಪು ಅಂಬೆರ್ಪುಲಿ ಕೈ ಮುಗ್ದಾಂಗೆ ಮಾಡಿ ನಾ ಮುಂದ್ವರ್ಸಿದೆ...

ಮದ್ಯಾನ ಊಟಕೆ ಹೋಕನ ಹೋಟ್ಲಕ್ಕಲೆ ಮರದ ಕೆಳಗೆ ಬೊಳ್ಪುಗೆ ಕಂಡ ಅದೇ ಮೊರ್ಲಕುದ್ದು ಕಂಡಿತ್ತ್.. ಇವನ ಇದ್ಕೆ ಮುಂದೆ ಎಲ್ಲೋನೋಡ್ಯಳೆ ಅನ್ಸಿತ್ತ್.., ನಂಗೆ ಕೆಲ್ಸಗ ಬಾಕಿದ್ದರ್ಂದರಪ್ಪ ಊಟ ಮಾಡಿ ಬಂದೆ.

ಹಿಂಬೊತು ಅಸ್ಟೇ ಕೆಲ್ಸ ಬುಟ್ಟೋಕನನು ಅಂವ ಅವನಸ್ಟಕೆ ತಲೆಕೆ ಕರ್ಡ್ಡೋಟ್ಲಕ್ಕಲೆ ಅತ್ತಿತ್ತ ತಿಗ್ರ್ಯಂತ್ತ್...!

ಮಾರ್ನೆ ದಿನ ಬೊಳ್ಪುಗೆ ಕೆಲ್ಸಕೆ ಹೋಕನ ಅಂವ ನಿನ್ನೆ ಕುದ್ದಿದ್ದ ಜಾಗೆ ನೋಡ್ದೆ, ನೋಡ್ರೆ ಅಂವ ಕಾಂಬಕಿಲ್ಲೆ, ಮದ್ಯಾನ ಊಟಕೆ ಹೋಕನ; ಹಿಂಬೊತ್ಕೆಲ್ಸ ಬುಟ್ಟಾಕನ ನೋಡ್ದೆ ಆಗೊಳು ಇಲ್ಲೆ.. ಸುಡೊಲಿ ಊರ್ಬುಟ್ಟೋರೆಲ್ಲಾ ಹೋರ್ಗಿದುರ್ಂತ ಸುಮ್ಮಂಗಾದೆ..

ಯರ್ಡ್ದಿನ ಕಳ್ದಿರ್ದು ಹಿಂಬೊತ್ಕೆಲಿ ದುಡ್ಡಿಲ್ಲೆಂತಂಖಿ ಒಹಕ್ಕಲೆ ಹೋದೆ.. ಮುಂದೆ ಅದೇ ಮೊರ್ಲ ಒಂದ್ಕೆಲಿ ಜಿಡ್ಡಿಡ್ಡ ತಂಗಿಸ್ಟೀಲ ಹಿಡ್ಕಂಡ್ಕುದ್ದುಟು... ಒಳಗೋದ ಜನ ಹೊರಗೆ ಬಾಕನ ಇಂವರಪ್ಪ ಎದ್ನಿತ್ತೆ ಒಡ್ಡಿತ್, ದುಡ್ಡೆಕ್ಕ ಮಾಡಿ ಕಂಡ್ಮುಂದೆ ಹೋದವನು ರಪ್ಪ ಹಿಂದೆ ಬಂದ್ಕಿಸೆಲಿದ್ದ ಹತ್ರುಪಾಯಿ ಕೊಟ್ಟೀದ ಮುಂದೆ ಹೋತ್

ಹಂಗೆ ನಾನು ಒಳಗೋಗಿ ತಿರ್ಗಿಬಾಕನ ಆ ಮೊರ್ಲ ರಪ್ಪ ಎದ್ಕೆ ಒಡ್ಡಿತ್.. ನಾ ಆಗಳೇನೋ ಅವನ ಕೈಲಿದ್ದ ಹಚ್ಚೆ ರಂಗಾ, ಗಂಗಾ.. ಅವಂಗೆ ನನ್ನ ಗುರ್ತ ಸಿಕ್ಕಿತೋ ಇಲ್ಲೆನೊ ಈ ಸರ್ತಿ ನಂಗೆ ಅವನ ಗುರ್ತ ಸಿಕ್ಕಿತ್..

ಎದ್ದೋಬುಲಿದ್ದ ನೂರ್ರುಪ್ಪಾಯಿ ಕೊಟ್ಟೆ... ದುಡ್ಡ ಕಂಡಾಂಗೆ ಕೈ ಮುಗ್ದುರು ಪುರುಂತರೋಡ್ದಾಟಿ ಸೀದ ಹೋದೆ. ಒಳಗೆ ಹುಕ್ಕಾಯ ಆತ್... ನಂಗೆ ಮಾತ್ರ ಏನೋ ಬೇಜರಾಗಿತ್ತ್.

ಸೀದ ರೂಂಗೆ ಬಂದ್ದೋಸ್ತಿಗೆ ಸುರುಂದಳೆ ಆದ ಸಂಗತಿಗಳೆಲ್ಲ ಹೇಳ್ದೆ.. ನನ್ನ ದೋಸ್ತಿ ಹೇಳ್ತ್ತಂಗನಂತವ್ಕೆ ತೇಳಿಯೇ ಒಂದು ಶ್ರಮ ಉಟ್ಟು ಅವ್ಕೆ ಬೇಕಾದ ಮೊವರ ಎಲ್ಲ ಚಾಕರಿಗಳೆಲ್ಲ ಆ ಆಶ್ರಮದವೆ ನೋಡಿ ಕಂಡವೆಂತೇಳ್ತ್... ಆದರೆ ಸಮಸ್ಯೆ ಒಂದಿತ್ತ್ , ಈ ರಂಗ ಇದ್ದ ಜಾಗೆಲಿ ಇರ್ದುಲೆ ಕಲ್ಲಿಲ್ಲದ ಗುಳ್ಜನಾಂಗೆ ತಿರ್ಗಂಡೆ ಇರಂವ ಅಂವನ ಹುಡ್ಕುದು., ಹಿಡ್ಡಕರ್ಕಂಡ್ಹೋಗಿ ಸೇರ್ಸುದು ದೊಡ್ಡ ಬಈದ ಕೆಲ್ಸಾಗಿತ್ತಾವ್ಗೆ.. ಅವನ ಮಾರ್ನೆದಿನಂದ ಹುಡ್ಕಿಕೆ ಸುರುಮಾಡ್ದೆ.

* * *

ಅಂದ್ನಾ ಕೆಲ್ಸ ಮುಗ್ಸಿ ಹೊರ್ಡ್ಕನ ರಾತ್ರೆ ಒಂಬತ್ತ್.. ಮಾಮುಲ್ನ ಹೋಟಕೆ ಬಾಕನ ಅದೇ ನಮ್ಮ ರಂಗನನ್ನೆದ್ರೆಕಿತ್ಲೆಡಿಲಿ ನಾಲ್ಕುಳೆ ರಟ್ಟತ್ತೆ ತಲೆ ಮೇಲೆ ಒಂದ್ಚೆಲ್ಲಿ ನಾಂಗಿದ್ದ ಬಟ್ಟೆ ಹಿಡ್ಕಂಡ್ರೋಡ್ದಾಟಿ ಹೋದ್ಕಂಡತ್... ಅಂವ ಹೋವ ಪೊರ್ಲುಲೇ ಗೊತ್ತಾಂವ ಮಲ್ಗಿಕೆ ಯಾವ್ದೋ ಅಂಗ್ಡಿ ಜಗ್ಲಿ ಹುಡ್ತಾ ಉಟ್ಟುಂತ

ರಪ್ಪ ದೋಸ್ತಿ ಹೇಳ್ದ್ಂ ಪಾತ್ಕಲ್ಲಿಲ್ಲದ ಗುಳ್ಜನಂತವರ ಹಿಡೆಕೆ ರಾತ್ರೆನೆ ಆಕು ಎಲಂವ ಕಂಡರೆ ಕೈಕಾಲ್ಕಟ್ಟಿ ಆಶ್ರಮಕೆ ಸೇರ್ಸೊ ಮಂತೇಳಿತ್ತ್..

ರಪ್ಪ ದೋಸ್ತಿಗೆ ಕಾಲ್ಮಾಡ್ದೆ

ಅಂವ ಅದ್ಕೆ ಬೇಕಾದ ಜನನು ಹಿಡೆಕೆಬೇಕಾದ ವ್ಯವಸ್ಥೆನು ಮಾಡಿ ಕಂಡ್ಬಾತ್; ನೋಡಿ ಕಂಡಿದ್ದಾಂಗೆ ರಂಗನ ಹಿಡ್ದ್, ರಂಗನಂತವ್ಕೇತೇಳಿವರ್ಂತ ಆಶ್ರಮಕೆ ಕರ್ಕಂಡ್ಹೋಗಿ ಸೇರ್ಸಿದ... ಹಈ ಸಮಾದನ ಆತ್,

ಅಂತು ರಂಗಂಗೆ ನೆಲೆ ಸಿಕ್ಕಿತಲಾಂತ ನೆಮ್ಮದಿಲಿ ಬಂದ್ನಿಲ್ಗಿದೆ

* * *

ಮೊನ್ನೆ ಹಿಂಬೊತ್ಕೆಲ್ಸ ಮುಗ್ಸಿಬಾಕನ ಒಬ್ಬ ಕಂಡತ್..; ಗಡ್ಡ ಏನು ಇಲ್ಲೋರು ಹಿಂದೆಂದ ನೋಡ್ಕನ ಮಾತ್ರ ರಂಗನಾಂಗೆ ಕಂಡದೆ... ನಂಗೊಮ್ಮೆ ಆಶ್ಚರ್ಯ ಇದ್ಯಾರಪ್ಪಂತ.. ಎರ್ಲಿ ಸುಟ್ಟೇ ಹೋಗಲಿಂತ ಹಕ್ಕಲೆ ಅಂಗಡಿಯವನೊಟಿಗೆ ಹೋಗಿ ವಿಚಾರ್ಸಿದೆ...

ಅಂವ ಹೇಣ್ಣ ಅದ್ನೀವು ಮೊನ್ನೆ ರಾತ್ರೆ ಕೈಕಾಲ್ಕಟ್ಟಿಕ ಕರ್ಕಂಡ್ಹೋದ ಜನಾನೆಂತೇಳ್ತ್....!!

ನಾ ಅವನಾಂಗೆ ಕಾಂಬಲ್ಲೆಲಾ ತೇಳ್ದೆ !,

ಅಂಗಡಿಯಂವ ಹೇಳ್ತ್ –"ಮೊರ್ಲು ಅವಂಗಲ್ಲ, ನೀವ್ಗೆ ಮೊರ್ಲು"

"ಅವನ ಸಂಗತಿ ನೀವ್ಗಿನ್ನು ಗೊತ್ಲೆಣ್ಣ,

ಆಶ್ರಮಕೆ ಹೋದಾಂಗೆ ಅವನ ಕೂದಲ್ಗಡ್ಡ ಎಲ್ಲ ಚೌರ ಮಾಡ್ವೆ ಅದಾದ ಯರ್ಡ್ದಿನಲಿ ಅಂವ ಹೇಂಗಾರ್ಮಾಡಿ ತಪ್ಪುಸಿ ಕಂಡ್ಬಂದದೆ.; ಅವಂಗಿದ್ದೊಸ್ತಲ್ಲ.."

ಇದ್ನೆ ಸರ್ತಿ ತಪ್ಪುಸಿ ಕಂಡ್ಬಾದು ತೇಳ್ತ್..

ಅವನ ಅವನಸ್ಟಕೆ ಬೊದ್ಕಿಕೆ ಬುಡಿ ಅಂವ ಯಾರಿಗು ಉಪದ್ರ ಮಾಡ್ದುಲೆಂತೇಳ್ತ್...

ಅಂವ ಹೇಳ್ದರ್ಲು ಸತ್ಯ ಉಟ್ಟುಂತ ಅನ್ಸಿತ್...ಮೊನ್ನೆ ಮೊನ್ನೆ

ರಂಗನಾಂಗೆ ಊರು ತಿರ್ಗ್ಯರ್ಂಡಿದ್ದ

ಸುಳ್ಯ ಬಸ್ಟ್ಯಾಂಡ್ಲಿ ಬಿಕ್ಷೆ ಬೇಡಿ ಕಂಡಿದ್ದರಾನು ಮೊಂದಲ್ಗೆ, ವಿದ್ಯೆ ಕೂಡ ಇಲ್ಲೊದವ್ನು .. .ಒಳ್ಳೆ ಸಿಂಗಗಿ ದೇಸಲೇ ಹೆಸ್ರಾಡ್ತ್..,

ಅಸ್ಟೇ ಯಾಕೆ ಮೊನ್ನೆ ಒಬ್ಬ ಹೈದ ವಿದ್ಯೆ ಹೆಚ್ಚಾಗಿ ಏರ್ಪೋರ್ಟ್ಲಿ ಬಾಂಬು ಇಸಿ ಜೈಲಿಗೆ ಹೋಗಿ ಹೆಸ್ರಾಡ್ತ್

ಯಾರ್ಯಾಗ ಏನಾದವೆ ಹೇಂಗಿದ್ದವೆ ಹೇಳಿಕಾದುಲೆ;

ನಡೆವ ದಾರಿ ಮಾಡಿಕೊಟ್ಟೆಸ್ರಾಡಕ್..,!!?

ನಡೆವ ದಾರಿಗೆ ಹೇತಾಕಿದು ಹೆಸ್ರಾಡಕ್ !!!

ಎಲ್ಲ ಔಕೌಕೆ ಬುಟ್ಟದ್ಂತೇಳಿ ನೆನ್ಸಿಕಂಡ್ನಾಬೈಕ್ಷಟ್ರ್ಮಾಡ್ದೆ....

**(ಅರೆಭಾಷೆ ಕತೆ ಸ್ಪರ್ಧೆಲಿ ಎರಡನೇ ಬಹುಮಾನ ಪುರಸ್ಕೃತ)**

# ದೇವ್ರು ಮಾಡ್ದ ನೇರಳೆ ಕಾಡ್



**ಮನೋಜ್ ಕುಡೇಕಲ್ಲ್**

ನೇರಳೆ ಕಾಡ್ ನಮ್ಮೂರ್ನ ಎಲ್ಲಾ ಕಾಡ್ನಾಂಗೆನೆ ಒಳದ್. ಅಲ್ಲೆಲ್ಲ ನೀವ್ಗೆ ಕಾಂಬ ಪಚ್ಚೆನ ದೈಮರ ಬೊಳ್ಳಿಗ ಮಂದಲಿ ಒಂದಕ್ಕೊಂದ್ತೊಬ್ಬಿ ಕಂಡ್, ಕೈಕ್ಕೊಟ್ಟಂಡ್ಹಬ್ಬಿದ್ಬೆಳ್ದ ಪೂಮಲೆ ಕಾಡ್ನ ಒಂದ್ಮೂಲೆನೇ ಈ "ನೇರಳೆ ಕಾಡ್". ಹಾಂಗೇಳಿ ಅದೇನ್ಬರೀ ನೇರಳೆ ಮರಗ ತುಂಬಿದ ಕಾಡೇನಲ್ಲ. ಸರೀ ನೋಡಿ ಹೇಳಕುಂತಾರೆ ಅಲ್ಲಿರ್ದು ಒಂದೇ ದೊಡ್ಡ ನೇರಳೆ ಮರ. ಅಂದರೂ ಅದ್ಬಾರೀ ಹಳ್ತ್.

ಆಕಾಡ್ನ ಎಲ್ಲಾ ಮರಗ, ಪಡ್ವದ ಬಿಸಿಗಾಳಿಗೆ, ಮೂಡದ ಚಳಿಗಾಳಿಗೆ, ಹಗಲಾದರೆ ತಲೆ ತೂಗಿಕಂಡ್, ಇರ್ಲಾದರೆ ತೂಕಡ್ಸಿ ಕಂಡ್ದಿನಾ ಕುಸಿಕುಸಿಲಿ ಉಸುರಾಡಿರೆ, ಈ ನೇರಳೆಮರಕೆ ಅದೇಕೋ ಆ ಭಾಗ್ಯ ಇಲ್ಲೆ. ಅದ್ಕೆ ಒಮ್ಮೊಮ್ಮೆ ಉಸುರು ತೆಗಿಯಕಾಗದಾಂಗೆ ಆದೆ. ಮಾತ್ಬಾರದ್ದರೂ ಅದು ನೂದುಕ್ಕಳ್ಸಿದೆ!

ಅದೆಂತದೋ ಬೇಜಾರ್, ಅದೆಂತದೋ ಬೇನೆ ಆ ಮರಕೆ. ಆಗಾಗ ಕೊಲ್ಲಿನ ನಡುಲಾಗಿ ತೇಲಿ ಬಾವ ಹೂ ಗಾಳಿಗೆ ಸೊಪ್ಪು ನೆಡೆಂದ ನೇರಳೆ



ಹಣ್ಣ್ ನೆಲಕೆ ತಟಪಟಂತ ಸಣ್ಣ ಶಬ್ದ ಮಾಡಿ ಬೀಳ್ತಿದ್ದದೆ. ಅದ್ ಈ ಮರದ ಕಣ್ಣೀರ್ನ ಹನಿಗಳ ಇರಕು ಕಂಡದೆ! ಇನ್ನೀ ಹಣ್ಣಾಗಿದೋ ಅಲ್ಲಾ ಬೇಜಾರುಲೋ ಆಗಾಗ ಬಾಡಿ ಬೀಳ್ವ ಸೊಪ್ಪುಗನೂ ಒಂತರ ಕಣ್ಣೀನಾರ್ಂಗೆನೆ. ದಂಟ್‌ಂದ ಉದುರಿ ಗಾಳಿಲಾಗಿ ತೇಲಿದ್ ಎಲ್ಲಿಲ್ಲಿಗೋ ಹೋಗಿಬಿದ್ದವೆ, ಏಕೇಂತೇಳಿರೆ ಅಲ್ಲೇ ಸ್ವಂತ ಮರದಡಿ ಉದುರಿ ಬೀಳಿಕೆ ಆ ಸೊಪ್ಪುಗಳಿಗೂ ಮನ್ಸಿಲ್ಲೆ.

ಅಲ್ಲೇ ಎಡೆಲಿ ಅತ್ತಿತ್ತ ಹಾರಿ, ಚಿಂವ್ಚೀಂಖ್ತೇಳಿ ಕೂಂಗುವ ಕೇನೆ ಮಂಜಳ, ಗೀಣಿಗೆಲ್ಲ ಅಲ್ಲಿ ಮರಕೆ ಮಾಡ್ದು ಕೂಡ ಸಮಾಧಾನನೇ ಇರಕು ಕಂಡದೆ. ಆ ದೂರದ ಬೆದ್ರ್ ಹಿಂಡ್ಲೂ ಈ ಮರ, ಮರದಡಿ ನೋಡಿರೆ ಸಂಕಟಮರ್ಕ. ಹಾಂಗೇ ಇರಕು ಅದುನೂ ಆಗಾಗ ನೆಟ್ಟೆ ಮುರಿದು, ಇರಇರಾಂತೇಳಿ ಮರ್ಡುದು.

ಅಲಾ? ಅಂದರೆ ಈ ಮರದಡಿ ಎಂತುಟ್ಟು? ಎಂತಕೆ ಈ ಮಾತ್ಬಾರದ ಮರಕೆನೂ ಬೇಜಾರ್?

* * *

ಹೌದು ಶ್ವೇತ,

ಅಲ್ಲಿ ನೋಡಿ, ಪಚ್ಚೆನ ಹುಲ್ಲ್ಕಾಡ್ನ ಎಡೆಲಿ, ನೆಲಕೆ ಹಾಸಿದ ದೂರದೂರದ ಕಾಡ್ಕಲ್ಲ್ನ ದಾರಿಲಾಗಿ ಮಂಕಾಗಿ ಮೆಲ್ಲ ತಬ್ಬಸಿ಼ ಕಂಡ್ನಡ್ಪರ್ತುಟ್ಟಲಾ ಅದ್ಶ್ವೇತನೆ.

ಆಗಷ್ಟೆ ಮೀದ ಚಂಡಿ ತಲೆಕೂದಲ್ನ ಹರ್‌ಂಡಿ ಕಂಡ್, ಆ ಬೋಳು ಕೆಬಿ, ಬೋಳುಗಂಟ್ಲ್ನ, ಬೊಟ್ಟಿಲ್ಲದ ಮೋರೆಲಿ, ಉಟ್ಟ ಮೊಡಿಬಟ್ಟೆಲಿ ಒಂದ್ನಮೂನೆನ ಜಡಲಿ, ಯಾರಿಗೂ ಅರ್ಥಾಗದ ಬೇಜಾರ್ಲಿ, ದುಕ್ಕಳ್ಸಿ ಕಂಡ್ಮೆಲ್ಲ ಬಂದ್ನೇರಳೆಮರದೆದ್ರಕುದ್ದುಟು ಶ್ವೇತ. ಹಾಂಗಾಗಿದೇ ಶ್ವೇತನ ಕಂಡಾಕನ ಈ ನೇರಳೆಮರಕೆ ಒಳೆಗೊಳೆಗೆ ಕಣ್ಣೀರ್!

ಅಲ್ಲಿ ಶ್ವೇತ ಮಂಕಾಗಿ ನೇರಳೆ ಮರದೆದುರ ನೆಲಲಿ ಮುಂಡಾಕಿ ಎಂತಕೆ ಕುದ್ದಾಳ್ದ್..?

ಅಲ್ಲೇ ಎದ್ರ ಹುಲ್ಲ್ಕಾಡ್ನ ಅಡ್ಡಲಿ ವಿಗುರ್ಜಿ"ಗ ಎಡ್ರ್ಕಾಣ್ತುಟ್ಟುಲ! ಅದ್ಯಾರ್ದ್?

ಅಂದರೆ ಹೊತ್ತ್ಹೋಗ್ತ್ನ ಗೊಡವೆ ಇಲ್ಲದೆ ಗಂಟೆಗಟ್ಲೆ ಯಾರ ನೆನ್ಸಿದ್

ಶ್ವೇತ ಕಣ್ಣೀರ್ಹಾರ್ಕೊತ್ತಳದ್..?

* * *

ಇದ್ ಇಂದ್ನಿನ್ನೆದಲ್ಲ,

ಕಳ್ದ ಆರ್ವರ್ಸಂದ ಹೀಂಗೆನೇ,

ದಿನಾ ಇದೇ ಬೊಳ್ಪುನ ಬೊಳ್ಕೆರ್ಲಿ ಶ್ವೇತ ನಡ್ಪಂದದೆ. ಹೀಂಗೆ ಕಣ್ಣೀರ್ಹಾಕಿ ಕಂಡ್ಕುದ್ದು ಕಂಡಿದ್ದದೆ.

ಸುತ್ತೆಲ್ಲ ನೋಡಿರೆ ಅಲ್ಲಿ ನೇರಳೆಕಾಡ್ಲಿ, ದಿನಾ ಮಂದ ಹಬ್ಬಿ ಕಂಡೋವ ಸಣ್ಣ ಸಣ್ಣ ಬೊಳ್ಳಿಗೊಳೊ, ಆ ಬೊಳ್ಳಿಲಿ ಹೂಮೊಗ್ಗು ಅರ್ಳತುಟ್ಟು. ಆ ಹೊಸ ಪರ್ಮಳದ ಹೂನ ಸುತ್ತ ಚಿಟ್ಟೆಗಳ ಹಿಂಡ್ಹಾರಿ ಕಂಡೊಳೊ. ಗಾಳಿಲಿ ಗುಂಯ್ಗುಂಯ್‌ಂತ ಮಕರಂದ ಹುಡ್ಕುವ ಜೇನ್ನೊಳಗನೂ ಒಳೊ. ಅಲ್ಲೇ ಮರಲಿ ಅರ್ದ ಕಟ್ಟಿದ ಗೂಡುಗೆ ಹುಲ್ಲ್ ಮೆಡಿಯಕೆ ಜೋಡಿಹಕ್ಕಿಗ ಹಾರಿ ಕಂಡ್ಲವಲವ್ಕಿಲಿ ಅತ್ತಿತ್ತ ಚುಳ್ಕೊ್ಳೊ. ಅತ್ತ ಪೂಮಲೆಂದ ದಿನಾ ಸೂರ್ಯ ಎದ್ದೊಳ್ಪು ಕೊಟ್ಟ್ ಹಿಂಬೋತಾಕನ ಕೆಂಪಾಗಿ ಮುಂಳ್ಗಿದೆ. ಚಂದ್ರಹುಣ್ಣಿಮೆ ನಂದ್ಮೋಡದೆಡೆಲಿ ತೇಲ್ದೆ... ಮೀಂಪುಳಿಗನೂ ಮಿಣ್ಕುವೆ. ಎಷ್ಟಾಯ್ಕ್ ಅಲ ಈ ಭೂಮಿ.

ಎಲ್ಲ ಆ ದೇವರ ಸೃಷ್ಟಿ ಬುಡಿ!

ಅಂದರೇ ಆ ದೇವ್ಮಾಡ್ದ ಎಲ್ಲಾ ಸೃಷ್ಟಿಗ ಸರಿ ಇದ್ದದೆನಾ..?

ಅಂದರೆ ಅಲ್ಲಿ ಪೂಮಲೆ ಕೊಡಿಲಿ ಕಾಂಬ ಬೇಂಗ ಮರಕೆ ಏಕೆ ಯಾವ ತಪ್ಪು ಮಾಡದೆನೂ ಸಿಡ್ಲೊಡ್ಡಾಳ್ದ್? ಅದ್ ಒಣ್ಗಿ ಇಂದೋ ನಾಳೆ ಕುಂಬಾಗಿ ಬೀಳಿಕೊಳದ್..? ಮೊನ್ನೆ ಮೊನ್ನೆ ಹಾರಿಕೆ ಕಲ್ತ ಬಿಳ್ಳೆರಮೆಣ್ಕ ಹಕ್ಕಿನ ಪಿಳ್ಳೆ ಇಂದೇ ಕೆಬಿದ್ದೆಕ್ಕೆ ಮುರ್ಕಂಡದ್..?

ಆ ಬೊಳ್ಳಿ, ಹಬ್ಬಿ ಹಬ್ಬಿ ಬೊಚ್ಚಿ ಅಲ್ಲೆದಪ್ಪಕೆ ಗಂಟ್ಬಿದ್ಬಾಪುತೊಳದೆಂತಕೆ?

ಹೌದು..!

ಸರೀ ನೋಡ್ರೆ ಇನ್ನೂ ಇಂತ ನೂರಾರ್ವಿ ಚಿತ್ರಗ ಒಳೊ..

ಇಲ್ಲೆ..! ಅಂದರೆ ಈ ನೆಲಲಿ ಎಲ್ಲನೂ ಸರಿಲಿ ಸೃಷ್ಟಿ ಆತ್ಲೆ. ಅಲ್ಲೊ ಹುಟ್ಟಿರೂ ಅವ್ಕೆಲ್ಲ ಬೊದ್ಕಿಕೆ ಈ ನೆಲ ಬುಟ್ಟತ್ಲೆ. ಒಂದೊಂದ್ನ ಮನ ಮೂನೆನ ಕಾಯ್ಲೆ, ಕಷ್ಟ ಅಂತೇಳಿಕೆ ಲವ್ಜೀವಿ ಜಂತುಗ, ಹಕ್ಕಿ, ಮೃಗಗನೂ ಸೀಕ್ಲಿ ಬೊದ್ಕೊಳದಂತೂ ಸತ್ಯನೇ ಅಲಾ..?

ಶ್ವೇತನಾಂಗೆ ..!

ಹೌದು ಶ್ವೇತನಾಂಗೆ..!

* * *

ಅಂದರೆ ಪುಣ್ಯಂತೇಳ್ದು ಯಾದ್ಕೆ..?

ಅಲ್ಲಿ ನೋಡಿ, ನೆಲಲಿ ಚೆರೆಹುಡ್ಕೆಂಡ್ಮೆಲ್ಲ ಮೆಲ್ಲಂಗೆ ಹಬ್ಬತಿದ್ದ ಕಾಡ್ಮಲ್ಲಿಗೆ ಬೊಳ್ಳಿಗೆ ಹೇಂಗೆ ಮರಗ ಕೈಕೊಟ್ಟುತ್ತಿಸ್ಕಣ ತೊಳೊ..!

ಅಂದರೆ ಅದ್ಕಾಡ್ಮಲ್ಲಿಗೆನ ಪುಣ್ಯನೇ ಆಕನ.

ಹೊಟ್ಟೆ ಇಸಿ ಕಂಡ್ಬಂದ ಕೊಟ್ಕೊಡ್ತ ಹಕ್ಕಿಗೆ ಅರ್ಕೆ ಬೊಳ್ಳಿ ಕೆಂಪುನ ಸ್ಟೀಂಹಣ್ಣ ತೋರ್ಸಿ ಕರಿತೊಳದ್..! ಅದುನು.

ಹಾಂಗೇನೆ, ಶ್ವೇತಂಗೊಂದ್ಪುಣ್ಯ.

ನೇರಳೆಕಾಡ್ನ ಅಂಗಾರ ಗೌಡ್ರ ಮೂರು ಮಕ್ಕಳ್ಳಿ ನಡುನವೇ ಶೇಖರ ಗೌಡ್ರು. ಹಿನೀಮಿಲಿಟ್ರಿಲಾತ್ವೆಣ್ಣ್ ಇಲ್ಯಾತ್, ಇನ್ನ್ ಮಕ್ಕ ಎಲ್ಲಿಂದಾದುತ ಅಜ್ಜಪ ಅಂಗಾರ ಗೌಡ್ರಸಿಟ್ಟ್ಗೆ ಕೆಲ್ಸನನೇ ಬುಟ್ಟು ಬಂದ ಶೇಖರ ಗೌಡ್ರುಗೆ ವರ್ಸನಾಕ್ಕಳ್ದರೂ  ಮನೆಲಿ ತೊಟ್ಟಿಲ್ತೂಗದೆ ಹೋತ್ಂತೇಳಿ ಕನ, ಶೇಖರ ಗೌಡ್ರು ಮತೆ ಅವರ ಹೆಣ್ಣ್ ಮಂಗ್ಲೂ ಅನಾಥ ಆಶ್ರಮಂದ,

ಯಾರೋ ಹಟ್ಟುಸಿದ, ಹುಟ್ಟುಸಿದವ್ಕೆ  ಬೇಡಾದ ಪಾಪದ ಕೂಸುನ ದತ್ತ ಕಂಡೋ ಅಲ, ಅದೇ ಕೂಸು ಈ ಶ್ವೇತ. ಮಕ್ಕ ಇಲ್ಲೇಂತ ಕೊರ್ಗಿದವ್ಕೆ ಶ್ವೇತ ಸಿಕ್ಕಿದ್ಪುಣ್ಯಂತಾದರೆ. ತಬ್ಬೊಲಿ ಆಕಿದ್ದ ಶ್ವೇತಂಗೆ ಅಯ್ಯೆಪ್ಪ ಸಿಕ್ಕಿದನ್ನೂ ಪುಣ್ಯಂತೇಳಿದೇ ಹೇಳ್ದು ಅಲಾ..?

ಬೆಣ್ಣೆನ ಗಟ್ಟಿನಾಂಗಿದ್ದ ಶ್ವೇತ ಎಲ್ಲರ ಪ್ರೀತಿಲಿ, ಅಗ್ನಿಷ್ಟುನೂ ಬೇದ ಇಲ್ಲದೆ ನೇರಳೆ ಕಾಡ್ ಮನೆಲಿ ಬೆಳ್ತ್. ಆಕನ್ನೆ ಶ್ವೇತಂಗೆ ಅಪ್ಪನ ಹೆಗಲ್ಲಿ, ಚಿಕಪ, ದೊಡಪ, ಅವರ ಮಕ್ಕ ಅಣ್ಣಂದರ ಹೆಗಲ್ಲಿ, ಬೆನ್ನಿ ಕುದ್ದಂಡ್ಸಣ್ಣೆ ತಿರಿಕನ ಇಲ್ಲಿ ಮರದಡಿಗೆ ಬಂದ್ಹೋದ ದಾರಿನ ನೆಂಪು, ದಾರಿಕರೆನ ಈ ನೇರಳೆ ಮರದ ನೆಂಪುನು!

ಏಕೆಂತೇಳಿರೆ ದಿನಕೆ ದಿನ ಕೂಡಿದ್ಕಾಲ ಕಳ್ದಾಂಗೆ ಕೂಸು ಬೆಳ್ಕಂಡ್ಹೋದಾಂಗೆ ಶ್ವೇತ ಎಲ್ಲ ಮಕ್ಕಳಾಂಗೆ ಚುರ್ಕುಲಿ ಕಮ್ಮಿ ಆ ಕಂಡೋತ್. ಓಡಾಟಲಿನು ಕಮ್ಮಿ. ಯೋಚನೆ ಮಾಡ್ದು ಕಮ್ಮಿನೋ ಅಲ್ಲಾ ಜಾಸ್ತಿ ಆತೊ. ಅಂತೂ ಪ್ರಾಯ ಹನ್ನೆಡ್ದಾಟಿ ಮೈನೆರ್ದಿನ ಹೋದಾಂಗೆ

ಅಲ್ಲಿವರೆಗೆ ಇದ್ದ ಓಡಾಟ ಇನ್ನೂ ಕಮ್ಮಿ ಆತ್. ಮನೆನ ಚಾವಡಿಂದ ಕೆಳೆಗೆ ಇಜ್ಜಲ್ಗೆ ಇಳ್ಯ ಕುಂತಾದರೆನೂ ಗೋಡೆ ಮುಟ್ಟಿ, ಮೆಟ್ಲ್ನ ಲೆಕ್ಕ ಹಾಕಿ ಇಳಿವಾಂಗಾತ್ಕಾರಣ ಅದರ ಕಣ್ಣ್ಹೋಟ್ಟಾತ್

ಆ ದೇವ್ರ ಸೃಷ್ಟಿಂದಾಗಿದೆ ಇರಕುದಿನೇ ದಿನೇ ಕಣ್ಣ್ಹೋಟ್ಟಾಗಿ ಶ್ವೇತ ಒಂದಿನ ಕುರ್ಡಿನೆ ಆಗ್ಯೋತ್.

ಊರೊಳಗೆ ಹಳ್ಳಿಮೊದ್ದು ಮಾಡ್ದೊ, ಇನ್ನೀ ಮಾಟ ಚಿದ್ರಮನಿ ಆಗು-ಟೊಂತೇಳಿ ಕುಂಟಾರ್, ಮಾಡಾಯಿಕಾಂತೇಳಿ ನೂಲು ಬಸ್ಮನೀರ್ಮಿಸಿ ಆತ್. ಎಲ್ಲೈಲಾ ್ಲತಿರ್ಗಿ ಆಸ್ಪತ್ರೆ ಅಂತೇಳಿ ಬೆಂಗ್ಳೂರ್ವರೆಗೆನ ಪೇಟೆಲಿ ತೋರ್ಸ್ಯಾಕನ ಅಕೇರಿಗೆ ಇದ್ಗುಣ ಆಗದ ಕಣ್ಣದೋಸ ಅಂತೇಳ್ದು ಕಡ್ಡಿಮುರ್ದಷ್ಟತ್ಯಂತಾತ್.

ಅಂದ್‌ಂದ ಶ್ವೇತಂಗೆ ನೇರಳೆಕಾಡ್ನ ಮನೆನ ಒಂದ್ಕೋಣೆನೇ ಇಡೀ ಪ್ರಪಂಚ ಆಗ್ಯೋತ್.

ನೇರಳೆಕಾಡ್ ಕುಟುಂಬದ "ಕುರ್ಡಿ" ಅಂತೇಳಿದ ಹಣೆಪಟ್ಟಿ ಕಟ್ಟಿ ಕಂಡ್ಮನೆ ನಯಾದೋ ಒಂದ್ಬೊಳ್ಪಿಲ್ಲದ ಕೋಂಬರೆಲಿ, ಕುರ್ಡುನ ಲೋಕಲಿ ಕಾಲನ ತೂಗತಿತ್ತ್ಶ್ವೇತ.

* * *

ವಿಧಿನೋ ಅಲ್ಲೋ ಈ ಸೃಷ್ಟಿನ ಆಟನೋ.

ಏಕೆನೋ ಏನೋ ಶ್ವೇತನ ಅಷ್ಟಕೆ ಬುಟ್ಟತ್ತೆ!

ಮೊನ್ನೆ ರೆಕ್ಕೆ ಮುರ್ದ್ಬಿದ್ದ ಹಕ್ಕಿ ಪಿಳ್ಳೆನ ಇಂದ್ಗಿಂಣ್ಣ ಕಚ್ಚಿತೀಂತ್. ಒಣ್ಗಿ ಕುಂಬಾದ ಮರ ನಿನ್ನೆನ ಗಾಳಿಮಳೆಗೆ ಬಿದ್ದೇ ಹೋತ್..ಇನ್ನೂ ಸುಮಾರ್...

ಕೆಲವೊಮ್ಮೆ ಸೃಷ್ಟಿ, ಬೇನೆ ತಿಂದವ್ಕೆ ಮತ್ತೊಮ್ಮೆ, ಇನ್ನೊಮ್ಮೆ ಅಂತೇಳಿ ಬೇನೆನ ತಿನ್ಸಿದೆ. ಅವರ ಕನ್ಸ್ ಆಸೆಗಳನೂ ಚಿದ್ರ ಚಿದ್ರ ಮಾಡ್ದೆ.

ಕಣ್ಣ್ ಕಾಣದ್ದರೂ ಜೀವ ಬೆಳ್ದಾಂಗೆಮನ್ಸ್ ಕನ್ಸ್ ಕಾಣದಿರ್ದೋ..? ಶ್ವೇತಂಗೆ ಪ್ರಾಯ ಇಪ್ಪತ್ತ್ ದಾಟುವ ಹೊತ್ತುಗೆ ಮೈ ಕೈ ಎದೆತುಂಬಿ ಅಪ್ಪಟ ಸುಂದರಿ ಆತ್.

ದಿನಗ ಕಳ್ದಿಂಗ ಆತ್. ತಿಂಗಗ ವರ್ಸ ಆದಾಂಗೆ ಶೇಖರ ಗೌಡ್ರುಗೆ ಚಿಂತೆನ ಮೇಲೆ ಚಿಂತೆ ಸುರಾತ್. ಒಂದ್ಕಡೆ ಮಗ ಕುರ್ಡಿ. ಮತ್ತೊಂದ್,

ಕುರ್ಡಿ ಆದರೂ ಅದೊಂದ್ಹೆಣ್ಣ್. ಹೆಣ್ತನ ತುಂಬ ಕಾರೆ ಮೊದ್ವೆ ಮಕ್ಕಂತೇಳಿದ್ ಆಕೊಲ?

ಅಂದರೆ ಶ್ವೇತಂಗೆ ಮೊದುವೆ ಮಾಡುವ ಕಾಲ ಬಂದೇ ಬುಟ್ಟ ತಲಾ ಅಂತೇಳ್ವ ಯೋಚನೆ ಮಲ್ಗಿರುಕುದ್ದರೂ ಬರತಿತ್ತ್.

ಶೇಖರ ಗೌಡ್ರು ಮತೆ ಅವರ ಹೆಣ್ಣ್,

ಕುರ್ಡಿ ಮಗಳ್ಗೆ ಮೊದುವೆ ಮಾಡ್ಸುದೇಂಗೆ ಅಂತೇಳ್ಯಾದರೆ. ಮೊದ್ವೆ ಆದರೂ ಇನ್ನೊಬ್ಬರ ಮನೆಲಿ ಈ ಗೂಡೆ ಬೊದ್ಕಿಕೆ ಸಾದ್ಯನ ಅಂತೇಳಿ ತಲೆ ಹಾಳಾತ್. ಏಳೆಂಟ್ಡಲ್ಲಾಳಿಗಳ ಮಾತಾಡ್ಸಿರೂ.ಒಂದೇ ಒಂದ್ಗಂಡ್ಸಿಕ್ಕುದು ಅನ್ಮಾನಾತ್.

ಕಡೆಗೆ ಮನೇ ಅಳಿಯ ಆಗಿದ್ಯಾರಾಬ್ಬ ಹುಡ್ಗ ಸಿಕ್ಕಲಿ ಅಂತೇಳಿದ್, ಅವಂಗೆ ಅಂಗಾಂಗ ಸರಿ ಇಲ್ಲದೆ ಒಡ್ಕ ಇದ್ದರೂ ಆದೂ, ಜಾಗೆ ಜಮ್ಮ ಕೊಟ್ಟವೆಂತ ದಲ್ಲಾಳಿಗಳೊಟ್ಟಿಗೆ ಹೇಳ್ಯಾತ್. ಹಂಗಾಗಿ ಅವುನು ಒಂಚೂರು ಚುರ್ಕಾಗಿ ಗಂಡ್ಹುಡ್ಕುದರ್ಲಿ ಇದ್ದೊ.

“ಇದರೆಡೆಲಿ ಇಂದ್ಗೆ ಒಂದ್ ಆರ್ವರ್ಸ ಹಿಂದೆ ಶೇಖರ ಗೌಡ್ರು ಮತೆ ಅವರ ಹೆಣ್ಣ್ “ತೋಟದ ದೊಡ್ಡಕೆರೆಲಿಹಿ ಹೆಣ ಆಗಿತೇಲಿ ಕಂಡಿದ್ದೊ ಗಡ”

ಅವ್ ಏನ್? ಎಂತಕೆ? ಸತ್ತೋಂತ ಇನ್ನೂ ಯಾರಿಗೂ ಗೊತ್ತೆ. ಅಂದರೂ ಬೊಜ್ಜ ಕಳ್ದಿಂಗಾಕನ ನೇರಳೆಕಾಡ್ ಮನೆ “ಎರ್ಡ್ ವಿಪಾಲ್ ಆದಂದರ್ದ ಎಂತದೋ ಸಂಸಯದ ಮೂರಿ ಕೆಲವರ ಮನ್ಲಿ ಎದ್ದುಮ್ಮನಾಗಿತ್ತ್” (???)

ಒಂದ್ಕಡೆ ಕಣ್ಣಿಲ್ಲದ ಬಾಳ್. ಈಗ ಕಣ್ಣಾಂಗಿದ್ದ ಅಯ್ಯೆಪ್ಪನೇ ಇಲ್ಲದೆ, ಮೊದ್ವೆನೂ ಆಗದೆ ಶ್ವೇತ ಒಂಟಿ ಹೆಣ್ಣಾತ್.

* * *

ಅಯ್ಯೆಪ್ಪನ ನೆಂಪುಗ, ಅಲ್ಲೇ ನೇರಳೆ ಮರದಡಿನ ಅವರ ಗುರ್ಜಿ ಹಕ್ಕಲೆ ಸಿಕ್ಕಿದೆನೋ ಏನೋ. ಅದ್ಕೇ ಕಂಡದೆ ಶ್ವೇತ ಅದರ್ದೇ ಲೋಕಲಿ ಹಾಂಗೆ ಅಲ್ಲಿ ಮರದಡಿಲಿ ದಿನ ಇಡಿ ಕುದ್ದುದರ್ದು.

ಯೌವ್ವನ ತುಂಬಿದ ಗೂಡೆಗೆ, ಆ ಮಾಯೆ ಕಲ್ಲುರ್ಟಿ ಮೋಸ ಮಾಡ್ತೊ ಅಂದರೆ? ಅದ್ಯಾವ ಕಾಯ್ಲೆ ಹೀಂಗೆ ಅದರ ಹಿಂಡಿ ಹಿಂಪೆ

ಮಾಡ್ತೊಳದ್?

ಅಯ್ಯೋ.., ಶ್ವೇತನ ಸಾಂಕಕಾದ ಅಯ್ಯಪ ಅದೇ ಗುರ್ಜಿನ ಒಳೆಗೆ ಬೂದಿ ಆಗಿ ಮಲ್ಗಿಯೊಳೊಲಾ!

ಶ್ವೇತ ಬೊದ್ಕುಲಿ ಗೊತ್ತುಗುರಿ ಇಲ್ಲದೆ ಬಾಡಿಹೋದರ ನೇರಳೆ ಮರಕೆ ನೋಡಿಕಾಗತಿಲ್ಲೆ.

ಏಕೆಂತೇಳಿರೆ ಈಗ ಬಾಡಿಹೋಗತಿರ್ವ ಶ್ವೇತ ಕಣ್ಣೆದ್ರನೇ ಅರ್ಳಿದರ ಮರ ಕಂಡುಟು. ಎಷ್ಟೊ ಹಣ್ಣಳ ತಿನ್ಸಿಟು. ಎಷ್ಟೊ ಪ್ರೀತಿ ಕೊಟ್ಟುಟು. ಈಗ ನೆರಿಕಟ್ಟಿದ ಮೋರೆಂದ ಅರಿವ ಶ್ವೇತನ ಕಣ್ಣೀರ್ನನೂ ನೋಡ್ತುಟ್ಟು.

* * *

“ಶ್ವೇತಾ... ಮದ್ಯಾನ ಆತಕ್ಕಾ ಉಂಬಕೆ ಬಾ”ಂತ ದೂರಂದ ಮೇಲೆ ಮನೆ ಗಿರ್ಜಕ್ಕ ಊಟಕೆ ಕರಿವಸದೆ ನೇರಳೆಕಾಡ್ನ ಒಳ್ಬೆಗಳುದ್ದಕೆ ಕೇಳಿ ಕರ್ಗತಿತ್ತ್...

**(ಅರೆಭಾಷೆಕತೆ ಸ್ಪರ್ಧೆಲಿ ಮೂರನೇ ಬಹುಮಾನ ಪುರಸ್ಕೃತ)**

**ಮನೋಜ್ ಕುಡೇಕಲ್ಲ್**
ಮೊಬೈಲ್ : 8105774518

# ಬನ್ನಿ ಓದೋಮ

ಓದು ನಮ್ಮೊಳಗೊಂದು ಸಂವೇದನೆನ ಹುಟ್ಟಿಸಿ ಹಾಕಿದೆ. ಸುತ್ತ ಮುತ್ತಲಿನ ಬೊದ್ಕ್ ನಾ ಬಗೆಗೆ ಚಿಂತೆ ಮಾಡ್ವಂಗೆ ಮಾಡ್ದೆ.  ಸರಿ ತೊಪ್ಪುಗಳ ಬಗೆಗೆ ಗ್ಯಾನ್ ಮಾಡುವಂಗೆ ಮಾಡ್ದೆ. ಒಳ್ಳೆಯ ಓದಿನ ಉದ್ದೇಶ ಕೂಡ ಇದುವೇ ತಾನೇ? ಈ ಸಲ ಸಂಚಿಕೆಲಿ ನಾಡ್ ನ ಪ್ರಸಿದ್ಧ ಕವಿ, ಅಂಕಣ ಕಾರ,ಕತೆಗಾರ,ಹಿಂಗೆ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ತೊಡ್ಗಿಸಿಕಂಡ ಜಯಂತ ಕಾಯ್ಕಿಣಿ ಯವರ ಅಂಕಣ ಬರಹ ‘ಬೊಗಸೆಯಲ್ಲಿ ಮಳೆ’ ಇದರ್‌ಂದ ಒಂದು ಬರಹ ನ ನಿಮ್ಮ ಮುಂದೆ ಓದಿಕೆ ಇಡುತ್ತೊಳೊ. ಇದ್ ಕೂಡ ನೀವಿಗೆ ಇಷ್ಟ ಆದೇ ಅಂತ ನೆನ್ಸಿಕಂಡವೆ. ಹೇಳ್ದಗೆ ಕಳೆದ ಸಲ ‘ಬನ್ನಿ ಓದೊಮೋ’ ಸಂಚಿಕೆಲಿ ಬಂದ ಪುಸ್ತಕಗಳ ನೀವು ಓದಿದರಿಯಾ? ಓದಿದರೆ ಒಂದೆರಡು ಸಾಲ್ ಅದರ ಬಗ್ಗೆ ಬರಿಯನಿ. ಸೂಕ್ತ ಅನ್ನಿಸಿರೆ ಹಿಂಗಾರಲಿ ಅದನ್ನ ಹಾಕಂಡವೆ. ನೂರು ಪುಸ್ತಕ ಓದೋಮೋ. ಒಂದು ಪುಸ್ತಕ ಬರಿಯೋಮೋ.

## ಸೈನಿಕ ಆಗು ಅಂತ ನೀನ್ಯಾಕೆ ಹೇಳಲ್ಲ?

“ಅಪ್ಪಾ, ಯುದ್ಧ ಯಾಕೆ ಮಾಡುತ್ತಾರೆ?”

“ಕಂದ, ನೀವೆಲ್ಲ ಆಟದಲ್ಲಿ ಜಗಳಾಡುವುದಿಲ್ಲವೆ? ಚೆಂಡಿಗಾಗಿ? ಸರದಿಗಾಗಿ? ಹಾಗೇ...”

“ಆದರೆ ಯುದ್ಧದಲ್ಲಿ ನಿಜವಾದ ಟ್ಯಾಂಕು, ಬಾಂಬು, ಗನ್ನು ಎಲ್ಲ ಇರುತ್ತದಲ್ಲ... ಜನ ಖರೇ ಸಾಯುತ್ತಾರಲ್ಲ...”

“ಹೌದು... ಇದು...”

“ಅವರಿಗೆ ಏನು ಬೇಕು ಅಂತ ಯುದ್ಧ ಮಾಡ್ತಾರೆ? ತಿಂಡಿ... ಊಟ... ಟೀವಿ... ಕಾರು...?”

“ಛೆ ಛೆ ಸ್ವಂತ ಕಾರಣಗಳಿಗಾಗಲ್ಲ... ಅದು ದೇಶಗಳ ನಡುವಿನ ಯುದ್ಧ.”

“ಅಂದರೆ?”

“ .........................”

“ಅಪ್ಪ ಹೆಂಗಸರು ಯಾಕೆ ಯುದ್ಧ ಮಾಡುವುದಿಲ್ಲ?”

“ಹಾಂ... ಗೊತ್ತು... ಅಮ್ಮ ಅಪ್ಪ ಇಬ್ರೂ ಯುದ್ಧಕ್ಹೋದ್ರೆ ಮಕ್ಕಳೇನ್ಮಾಡ್ಬೇಕು ಇಲ್ಲಿ? ಅದಕ್ಕೆ... ಅಲ್ವಾ?”

ಅಪ್ಪಾ ಮಕ್ಕಳು ಯಾಕೆ ಯುದ್ಧ ಮಾಡುವುದಿಲ್ಲ?... ಮಕ್ಕಳನ್ನು ಯಾಕೆ ಯುದ್ಧಕ್ಕೆ ಬಿಡುವುದಿಲ್ಲ?”

“ಮರೀ ನಿನ್ನನ್ನ ಯುದ್ಧಕ್ಕೆ ಕಳಿಸಿದರೆ... ಏನು ಮಾಡ್ತಿ ನೀನು?”

“ನಾನಾ? ಗಡಿಯ ಮೇಲೆ ಹೋಗಿ ನಿಂತು ಆ ಕಡೆಯವರಿಗೆ ‘ನೀವು ಮನೆಗೆ ಹೋಗಿ... ನಾನೂ ಮನೆಗೆ ಹೋಗುತ್ತೇನೆ’ ಎಂದು ಹೇಳ್ತೇನೆ.”

“ಅಪ್ಪಾ ಸೈನಿಕರ ಮಕ್ಕಳಿಗೆ, ಅವರ ಅಪ್ಪ ಕಾದಾಡುವುದನ್ನು ನೋಡಲು ಬಿಡುತ್ತಾರೆಯೇ?”

“ಸೈನಿಕರು ಸತ್ತರೆ... ನಂತರ ಅವರ ಮಕ್ಕಳನ್ನು ಯಾರು ಮುದ್ದು ಮಾಡುತ್ತಾರೆ?”

“ಹುತಾತ್ಮ ಅಂದರೆ ಏನು ಅಪ್ಪಾ? ವೀರಸ್ವರ್ಗ ಎಲ್ಲಿದೆ? ಅಲ್ಲಿ ನಾವೆಲ್ಲ ಹೋಗಬಹುದಾ?”

“ವೈರಿ ಅಂದರೆ ಏನು?”

“ಅವರಿಗೂ ಮಕ್ಕಳಿರುತ್ತಾರಾ? ಅವರೂ ಹಬ್ಬಕ್ಕೆ ಮನೆಗೆ ಹೋಗುತ್ತಾರಾ?”

“ವೈರಿಗಳೂ ಜಿಲೇಬಿ, ಮೈಸೂರು ಪಾಕು ತಿಂತಾರಾ?”

“ಯುದ್ಧದಲ್ಲಿ ಓಡುವಾಗ ಜಾರಿ ಬಿದ್ದುಬಿಟ್ಟರೆ ಏನಾಗುತ್ತದೆ? ಆಗ ಬೆನ್ನಟ್ಟಿ ಬಂದವರು ಬಿದ್ದಲ್ಲೇ ಗುಂಡಿಕ್ಕುತ್ತಾರಾ? ಅದು ಚೀಟಿಂಗ್ ಅಲ್ಲವೇ?”

“ಯುದ್ಧ ಮಾಡ್ತಿರೋವಾಗಲೇ ನಡುವೆ ಫೋನ್ ಬಂದರೆ ‘ಒಂದ್ನಿಮಿಷ’ ಎಂದು ಹೇಳಿ ಹೋಗಬಹುದಾ? ಅಲ್ಲಿಯ ತನಕ ಎದುರಾಳಿಗಳು ಕಾಯ್ತಾರಾ?”

“ವೈರಿಗಳ ಮಕ್ಕಳೂ ಅವರನ್ನು ‘ಅಪ್ಪಾ’ ಎಂದೇ ಕರೆಯುತ್ತಾರಾ?”

“ಅಪ್ಪಾ, ಗಡಿರೇಖೆ ಹೇಗಿರುತ್ತದೆ? ಫುಟ್‌ಬಾಲ್ ಮೈದಾನದ ಮಧ್ಯದ ಗೆರೆಯಂತೆಯೇ? ಅದನ್ನು ಶೇಡಿಮಣ್ಣಿನಿಂದಲೇ

ಎಳೆಯುತ್ತಾರೆಯೇ? ಮಳೆಗಾಲದಲ್ಲಿ ಅದು ತೊಳೆದುಹೋದರೆ ಮತ್ತೆ ಯಾರು ಹಾಕುತ್ತಾರೆ? ಅವರೋ ನಾವೋ?"

ಅಪ್ಪಾ ವಿಮಾನದಲ್ಲಿ ಹೋಗುವ ಸೈನಿಕರಿಗೆ ಈ ಗೆರೆ ಕಾಣೋದಾದ್ರೂ ಹೇಗೆ?"

"ಅವರ ದನಕರುಗಳು ಮೇಯುತ್ತ ಗೆರೆಯ ಈ ಕಡೆ ಬಂದುಬಿಟ್ಟರೆ ಏನಾಗುತ್ತದೆ. ಹಚ್ ಹಚ್ ಅಂತ ಅಟ್ಟುತ್ತಾರೋ ಅಥವಾ ಇಲ್ಲೇ ಕಟ್ಟಿಹಾಕುತ್ತಾರೋ. ಅವೂ ಕೂಡ ಅಂಬಾ ಅನ್ನುತ್ತವಾ? ಅವನ್ನು ಹುಡುಕಿಕೊಂಡು ಬಂದವರನ್ನು ಮನೆಗೆ ಕರೆದು ಕಾಫಿ ತಿಂಡಿ ಕೊಟ್ಟರೆ ಏನಾಗುತ್ತದೆ? ಪಾಪ ಬರುತ್ತದಾ?"

"ಅಪ್ಪಾ, ಪಾಪ ಅಂದರೆ ಏನು?"

"ಅಪ್ಪಾ ಅವರ ಗಾಯಾಳುವೊಬ್ಬ ಕೈಕಾಲು ಮುರಿದುಕೊಂಡು ಕೂಗುತ್ತ ನಮ್ಮೆಡೆಗೆ ಓಡಿಬಂದರೆ ಮೊದಲು ಅವನನ್ನು ಡಾಕ್ಟರರ ಹತ್ರ ಒಯ್ಯಬೇಕಲ್ಲವೇ? ಅಥವಾ ಬರೇ ನಮ್ಮವರನ್ನು ಮಾತ್ರ ಒಯ್ಯುವುದೋ?"

"ಅವರ ಕಡೆ ಹೋಗಿ ಸಿಕ್ಕಿಬಿದ್ದ ನಮ್ಮ ಸೈನಿಕರು 'ನಾವಿನ್ನು ಬರೋದಿಲ್ಲ ಇಲ್ಲೇ ಇರ್ತೇವೆ' ಎಂದರೆ?"

"ಯುದ್ಧ ಮಾಡುವಾಗ ಮಳೆ ಬಂದುಬಿಟ್ಟರೆ ಏನು ಮಾಡ್ತಾರೆ?"

"ಅಪ್ಪಾ... ಯುದ್ಧ ಶುರುವಾದಾಗ ಮೊದಲು ಮುಂದೆ ಯಾರು ಹೋಗುತ್ತಾರೆ? ಟಾಸ್ ಮಾಡ್ತಾರಾ? ಸೋತವರು ಯಾರು ಗೆದ್ದವರು ಯಾರು ಅಂತ ಯಾರು ಡಿಸೈಡ್ ಮಾಡ್ತಾರೆ?"

"ಯುದ್ಧದ ಮಧ್ಯ ನಾವು ಹೋಗಿ 'ನಿಲ್ಸಿ ಸಾಕು' ಎಂದರೆ ನಮಗೇ ಹೊಡೀತಾರೋ?"

"ಬಾಂಬ್ ಹಾಕ್ತಾರಲ್ಲಾ, ಆವಾಗ ಸೈನಿಕರ ಜೊತೆ ಆ ಜಾಗದಲ್ಲಿರೋ ಅಳಿಲು, ಗಿಳಿ, ಹಾವು, ನಾಯಿ, ಬೆಕ್ಕು ಎಲ್ಲಾ ಸುಟ್ಟು ಹೋಗ್ತಾವಾ? ಅಥವಾ ಅವನ್ನ ಮೊದಲು ಖಾಲಿ ಮಾಡ್ಸಿ ನಂತರ ಬರೇ ಮನುಷ್ಯರ ಮೇಲಷ್ಟೇ ಬಾಂಬು ಹಾಕ್ತಾರಾ?"

"ಅಪ್ಪಾ... ದೇಶದ ಪ್ರಧಾನಮಂತ್ರಿ ಹೇಳಿದರೆ ಯುದ್ಧ ನಿಲ್ತದಾ? ಹಾಗಾದ್ರೆ ಅವರು ಯಾಕೆ ಬೇಡ ಹೇಳ್ತಿಲ್ಲ?"

"ಅಪ್ಪಾ, ತೀರಿಹೋದ ಯೋಧರನ್ನು ತರುವ ಪೆಟ್ಟಿಗೆಗೆ ಬಾವುಟ

ಯಾಕೆ ಹೊದೆಸುತ್ತಾರೆ? ಅವರ ಮನೆಯ ವಿಳಾಸ ಅವರಿಗೆ ಕರೆಕ್ಟಾಗಿ ಹೇಗೆ ತಿಳಿಯುತ್ತದೆ? ಅದು ಬಂದಾಗ ಮನೆಯವರು ಇಲ್ಲದಿದ್ದರೆ... ಏನು ಮಾಡ್ತಾರೆ?"

"ನನ್ನ ಬಳಿ ಇರೋ ಆಟದ ಪಿಸ್ತೂಲು ಗನ್ನು ಜೀಪುಗಳನ್ನೆಲ್ಲ ಕಳಿಸಿಕೊಟ್ಟರೆ ಸೈನಿಕರಿಗದು ಉಪಯೋಗವಾದೀತಾ?"

"ಐಡಿಯಾ!... ಒಂದು ರಾತ್ರಿ ಸದ್ದಿಲ್ಲದೆ ಎಲ್ಲಾ ಮಕ್ಕಳು ಅಲ್ಲಿಗೆ ಹೋಗೋದು.. ಅವರೆಲ್ಲ ಮಲಗಿದ್ದಾಗ.. ಮೆತ್ತಗೆ ಎಲ್ಲಾ ಖರೇ ಬಂದೂಕು ಗಂಡುಗಳನ್ನೆಲ್ಲಾ ತೆಗೆದು ಅವುಗಳ ಜಾಗದಲ್ಲಿ ನಮ್ಮ ಆಟದ ಬಣ್ಣ ಬಣ್ಣದ ಪಿಸ್ತೂಲು, ನೀರಿನ ಗನ್ನು ಇಟ್ಟು ಗುಪ್‌ಚಿಪ್ ಬಂದು ಬಿಡೋದು! ಬೆಳಗೆದ್ದು ಯುದ್ಧ ಶುರು ಮಾಡ್ತಾರೆ... ಡುಸ್‌ಪುಸ್... ಠುಸ್‌ಪುಸ್... ಯಾರಿಗೂ ನೋವಿಲ್ಲ ಯರಿಗೂ ಸಾವಿಲ್ಲ... ನಂತರ ಎಲ್ರೂ ನಗೋಕೆ ಶುರು ಮಾಡ್ತಾರೆ... ಫ್ರೆಂಡ್ಸ್ ಆಗ್ತಾರೆ...

"ಅಪ್ಪಾ ಎಲ್ರೂ ಚೆನ್ನಾಗಿ ಓದಿ ದೊಡ್ಡ ಇಂಜಿನಿಯರ್, ಡಾಕ್ಟರು, ಆಫೀಸರ್ ಆಗು ಅಂತಾರಲ್ಲ. ಸೈನಿಕ ಆಗು ಅಂತ ಯಾಕೆ ಹೇಳಲ್ಲ?"

"ಅಪ್ಪಾ, ನೀನ್ಯಾಕೆ ಸೈನಿಕ ಆಗಲಿಲ್ಲ?"

# ಹೆಸರಿಲ್ಲದ ಒಂಟಿ ಜೋಡಿ...



ಮನೋಜ್ ಕುಡೇಕಲ್ಲ್

ಅದಲ್ಲಿ ದೂರಲಿ ಕಾಣ್ತುಟ್ಟಾ ನೀವ್ಗೆ..?
ಪಚ್ಚೆ ಮುಚ್ಚಿದ ಸೊಪ್ಪು ಮರಗಳಡಿಲಲ್ಲಿ
ನಡು ನಡುಲಿ ಕರಿಕಲ್ಲ್‌ನೊತ್ತಿ, ಮುತ್ತೊಟ್ಟ್
ಹನಿಹನಿಗ ಸೇರಿ ಕೈಕೊಟ್ಟರಿ ತೊಳದ್..?
ಅಲ್ಲಲ್ಲಿ ತಗ್ಗ್‌ಗೆ ಹಾರಿ ಅಬ್ಬಿನಾಂಗಾಗಿದ್.
ಧರೋಂ... ತೇಳಿ ಶಬ್ದ ಮಾಡ್ತೊಳದ್ !
ಕೇಳ್ತುಟ್ಟಾ ನೀವ್ಗೆ..? ಆ ಒಂಟಿ ಜೋಡಿನ ಉಸ್‌ರ್..!



ಅಲ್ಲಿ ಗೊಡಲ್‌ಂದ ಬಿಳಿನೊರೆನಾಂಗೆ ಉಕ್ಕಿ,
ಮೇಲೆದ್ದೆಲ್ಲಂಗೆ, ಬೊಯ್ಲ್‌ನುದ್ದಕೆ ಕರೆಲಿ,
ಸದ್ದುದ್ದಿಲ್ಲದೆ ಉದಾಕೆಹರಿತುಟ್ಟು ನೋಡಿ..!
ಕಾಣುಟ್ಟಾನೀವ್ಗೆ ಆ ನನ್ನ ಒಂಟಿ ಜೋಡಿ ?

ಮೊನ್ನ ಮೆಟ್ಟದ ಕಾಡ್ ನಡುನ ಮಳೆನೊಟ್ಟಿಗೆ,
ಸುಯ್ಯೊಂತೇಳಿ  ಬೀಸ್ವ ತೊಂಪು ಗಾಳಿನೊಟ್ಟಿಗೆ,
ಮತ್ತೀಸುತ್ತ ನೆರೆಕರೆ ಪದ್ಯ ಕಟ್ಟಿ ಕೂಂಗುವ
ಬಗಬಗೆನ ಕಾಡ್ಹಕ್ಕಿ ಹಿಂಡ್‌ನೊಟ್ಟಿಗೆನೇ ಅಲ?
ಈಚೋಡಿ ಕಲ್ತದ್, ಅಪ್ಪಟ ಕಾಡ್‌ಬಾಷೆನ?
ಒಮ್ಮೊಮ್ಮೆ ಕಾಲಬಾಕನ ಶಬ್ದ ಮಾಡಕುಗಡ..
ಒಮ್ಮೊಮ್ಮೆ ಮೆತ್ತಂಗೆ ನೂಹರ್ಯಕುಗಡ.
ಎಲ್ಲಾದರೆ ಏನಾತ್, ನೀರ್‌ಂತಾದ ಮೇಲೆ
ಇಳ್ವಾರ್ಕಡೆಗೆ ಹರ್ಕಂಡೆ ಇರೊಕೇ ಗಡ!

ಆ ದೂರ ದೂರುನ ದೊಡ್ಡ ಹಳ್ಳದಾಂಗೆಲ್ಲ
ಉದ್ದ, ದಪ್ಪ, ತೂಕದ ಹೆಸರ್‌ನ ಹಂಗಿಲ್ಲೆ.
ಎಲ್ಲೋ ಹುಟ್ಟಿ, ಎಲ್ಲೋ ಸೇರ್‌ವ ಇಂತೆಲ್ಲ
ಒಂಟಿ ಜೋಡಿಗಳ ಗುರ್ತ ಯಾರಿಗುಟ್ಟೇಳಿ?
ನಾಗುರ್ತ ಹಿಡಿವೆ ಈ ಒಂಟಿ ಜೋಡಿನ..!
"ಅರ್ಗಾಲಾದರೂ, ಬರ್ಗಾಲಾದರೂ ಹೆದ್‌ರದೆ
ಬತ್ತದೆ, ಒಣ್ಗದೆಹರಿಯದಿರಿ ಕಿಲೆ ಇದ್ !
ಮಳೆ "ಕಾಲ" ಬಾಕನ, ಆಕರ್ಜಿಮೆಕಾಡ್‌ನೆದೆಲಿ,
ಧರೋಂ... ತೇಳಿಸದ್ದಾಡದಿರಿಕಿಲೆ..!"

(ಅರೆಭಾಷೆ ಕವನಸ್ಪರ್ಧೆಲಿ ಪ್ರಥಮ ಬಹುಮಾನ ಪುರಸ್ಕೃತ)

---

**ಮನೋಜ್ ಕುಡೇಕಲ್ಲ್**
ಮೊಬೈಲ್ ನಂಬ್ರ :8105774518

# ಶುದ್ಧಾತ್ಮನ ಚಿಂತನೆ



ವಿಶ್ವನಾಥ ಎಡಿಕೇರಿ

ಷಷ್ಟ್ಯಾಬ್ಧಿನ ನಡ್ಸಕನ ನಂಗೆ ಪುರ್ಸೊತ್ತು ಎಲ್ಲಿ...
ಮುಳುಗಿದ್ದೆ ಸತ್ಯಾಗ್ರಹ ಚಳವಳಿ ಹೋರಾಟಲಿ
ಶತಮಾನೋತ್ಸವ ಮಾಡಿಕೆ ಯಾರಿಗೆ ನೆಂಪಾದೆ
ಈಗೀಗ ತಕಲಿಗೆ ಹತ್ತಿಯಿಲ್ಲೆ ಇದ್ದದೂ ಗಂಟ್ಗಂಟಾದೆ
ಎಣ್ಣೆ ಪೂಜದೆ ನನ್ನ ಚರಕ ಕಿರಿಕಿರಿ ಸದ್ಮಾಡಿದೆ
ಛೆ.... ಹಿಂಗಾದರೆ ಬಂಗ ಆದೆ ನನ್ನ ಖಾದಿ ನೇಯ್ಗೆ



ನೇಯಕು ಎರಡ್ತುಂಡು ಮುಂಡು ನನ್ನವಳಿಗೆ ಸೀರೆ ಒಂದೆರಡ್
ಕೇಳ್ಸಿದೆ ನಾ ನಿಮ್ಮಲ್ಲಿ ಚಟ-ಪಟಾತನೆಯ್ಯುವಲಾಳಿದ್ಸದ್ದ್
ನಮ್ಮದೇ ರಾಜಭಾರಲಿ ಹೆಚ್ಚಾಗಿರ್ದುರ್ ಕೈಮಗ್ಗ-ಗುಡಿಕೈಗಾರಿಕೆದ್
ಏನ್ಹೇಳ್ರೆ.....' ಯಾವ ಕಾಲಲಿವಳ ನೀ ಬರಿಕಾಲ್ನ ಪೆದ್ದ್ '
ಹೌದಪ್ಪಾ... ಹೌದು.. ಮರ್ತ್ಬರ್ಂದೊಳೆ ನನ್ನ ಕಡಾವು
ಜೊತೆಲಿ.... ಸೊಂಟಲಿ ತೂಗಾಡ್ತಿದ್ದ ಗಡಿಯಾರ
ಕೇಳ್ಸುದುಲೆ ಈಗ ಅದರ ಜೋಗುಳದಂತ ಸದ್ದ್
ಮತ್ತೆ ಬನ್ನೆತದೇನಿಸಿ ಗೋಡೆಗೊರಗಿಸಿದ ಊರುಗೋಲು
ಎಲ್ಲೂ ಕಾಂಬದುಲೆ ಹುಡುಕಿರೂ ಸಿಕ್ಕುದುಲೆ
ನನ್ನ ಉರುಟು ಕನ್ನಡಕ
ಅಣಗ್ಸಿದ್ದರೆ ದಮ್ಮಯ್ಯ ಕೊಟ್ಟು ಬುಡಿಪುಂಡು ಮಕ್ಕ
ದಾತ್ಬಲ ಇಲ್ಲದೆ ಮೈಯೆಲ್ಲಾ ನಡ್ಕ
ರಟ್ಟೆ ಬುಜ ಹಿಡ್ಕಂಡ್ಮೆಲ್ಲಂಗೆ ನಡ್ಸವು ಇಲ್ಲೆ ಈಗ
ದೂಳು ಗುಡ್ಸ್ನನ ಸಿಕ್ಕಿರೆ ನನ್ನ ವಹಿ-ಪೆನ್ಸಿಲ್
ಹಂಞ ಕಳ್ಸಿಕೊಡಿ ಇತ್ತ ಬರುವವರ ಕೈಲಿ
ಅಲ್ಮರ್ಲ್ ಆಕೆ ಮುಂದೆ ಬರಿಯ ಕುಟ್ಟು ತಪ್ಪುಗಳ ತಿದ್ದಿ
ನನ್ನದೇ ಆತ್ಮಕತೆನ ಮಾಡೋಕು ಸ್ವಲ್ಪ ಶುದ್ದಿ
ನನ್ನವಳ ದೊನಿ ಒಳಗೆಂದ ಪಿಸುಗುಟ್ಟಿದೆ ಆಗಾಗ
ಸಾಕ್.. ಸಾಕ್ನಿಮ್ಮ ಹಳೆನೆಂಪುಗಳ ರಾಗ
ಬೆದ್ಕಿರೆ ಈಗ ಸಿಕ್ಕುದು ನೀವಿಗೆ ಬರಿ ಕಚ್ಚುವ ಹಾವುಗ
ಅಂದೇ ಮರ್ತೊಳೋ ನಿಮ್ಮ ಮಾತ್-ಮಾರ್ಗ
ಪ್ಯಾಟೆಲೆಲ್ಲಾ ಉಟ್ಟು ನಿಮ್ಮ ಹೆಸರಿಗೆ ಒಂದೊಂದು ರಸ್ತೆ
ನಿಲ್ಲಿಸಿವಳೊ ಅಲ್ಲಿ ಅಂಸರಲಿ ಹೆಜ್ಜೆ ಹಾಕುವ ನಿಮ್ಮ ಗೊಂಬೆ

*************

(ಅರೆಭಾಷೆ ಕವನಸ್ಪರ್ಧೆಲಿ ಎರಡನೇ ಬಹುಮಾನ ಪುರಸ್ಕೃತ)

---

**ವಿಶ್ವನಾಥ ಎಡಿಕೇರಿ**
'ತುಳಸಿ'
ಸಂಖ್ಯೆ: 4/ 63, 7ನೇ ಕ್ರಾಸ್, ಬ್ರಂದಾವನ ನಗರ
ಮತ್ತಿಕೆರೆಪೋಸ್ಟ್ , ಬೆಂಗಳೂರು– 560054

# ಅವ್ವನ ಗ್ಯಾನಾದೆ



ಕುಕ್ಕನೂರು ರೇಷ್ಮ ಮನೋಜ್

ಪಟಪಟ ಮಳೆಬಾತು ನೆಂಪೆಲ್ಲ ಹಾರಿಹೋತು
ಮಾಸಿಹೋದರೂ ಮೂಡಿ ಬರ್‌ಲಾತ್ತ್ ಸಣ್ಣದೊಡ್ಡ ಹೆನಿಹಂಗೆ
ಹಪ್ಪಳ ಸಾಂತಾಣಿ ಗೇರ್‌ಬೀಜ ಮಾಂಬಳ
ಎಲ್ಲಾನೂ ತೆಗೆದಿಡ್‌ತಿದ್ದ ಅವ್ವನ ಗ್ಯಾನಾದೆ ನಂಗೆ

ಅಡ್ಡಂದ ಕೆಳಗಿಲ್ದ ತಪ್ಪುಗೆ ಕೆಂಡಲಿ ಸುಟ್ಟೋಣ
ನಮ್ಮಗಳ ಬಾಯ್‌ಲಿ ಕುರ್‌ಕುರ್‌ತ ಮರ್‌ಡ್‌ತಿತ್ತ್



ಒಲೆಬುಡದ ಕರಿಕಾಫಿ ನಾಲಗೆ ಸುಟ್ಟಂಗೆ
ಮೂಡ್ದ ನೆಂಪುಗಳ ಜೋಂಪೆಲಿ ಅವ್ವನ ಗ್ಯಾನಾದೆ ನಂಗೆ

ಎಲೆ ಅಡ್ಕೆ ಹಾಕಂಡ್ ಬಾಯಿ ಕೆಂಪು ಮಾಡ್ದಂದ್
ಸೀತಾಪಹರಣ ವನವಾಸಾಂತ ಗೋಳೆಲ್ಲಾ ಹೇಳ್‌ಕಂಡ್
ಅಯ್ಯೋ ಹೆಣ್ಣೇ ನಿಂಗೆಂತ ಕಷ್ಟಾಂತ ಅಂದ್‌ಕಂಡ್
ಸೊರಸೊರ ಮೂಗೊರಸ್ತ ಕಥೆ ಹೇಳ್ಕ ಅವ್ವನ ಗ್ಯಾನಾದೆ ನಂಗೆ

ಹೆಣ್ಣಿಗೊಂದು ಗಂಡು ಹುಡ್ಕಿ ಸಂಧಾನ ವಹಿಸ್ಕಂಡ್
ಊರ್ ತುಂಬಾ ಚಪ್ರ ಹಾಕ್ಸಿ ಸೋಬಾನೆ ಹಾಡ್‌ಕಂಡ್
ಕಷ್ಟ ಮೆಟ್ಟಿ ಸುಖ ಉಂಡು ಸಂಗೀತ
ಬಾಯ್ತುಂಬ ಹರಸ್ದ ಅವ್ವನ ಗ್ಯಾನಾದೆ ನಂಗೆ

ಯಾರ್ರ್ಯಾರ್ದೋ ನೆರ್ದಮೊದ್ದೆ ಬಾಣಂತಿ ಕೂಸಿಗೆಣ್ಣೆ
ದೃಷ್ಟಿ ನಿವಾಳಿಸ್‌ತ್ ನಾಟಿಮೊದ್ದು ಕಷಾಯ ಅರ್‌ಕಂಡ್
ಉಸ್ಸೂತ ಉಸುಲ್ ಬುಡ್ದೆ ಕುಟುಕುಟು ನಡ್‌ಕೆಂಡ್
ಓಡಾಡ್ದ ಗಟ್ಟಿಜೀವ ಅವ್ವನ ಗ್ಯಾನಾದೆ ನಂಗೆ

ಅಕ್ಕಿರೊಟ್ಟಿ ದೋಸೆ ಚಟ್ನಿ ಮನೆಗೆಲ್ಲಾ ಹಂಚಿಕೊಟ್ಟು
ರಾಗಿ ಅಂಬ್ಲಿ ಬೈನೆ ಮಣ್ಣಿ ಕೂವೆಗೆಣ್ಸು ತಿಂದ್‌ಕಂಡ್
ತಾಪತ್ರೆನ ಹೇಳ್‌ಕೂದೆ ಕಷ್ಟನೆಲ್ಲಾ ಉಂಡ್‌ಕಂಡ್
ನಾವ್‌ಗೆಲ್ಲಾ ಸುಖ ಹಂಚಿದ ಅವ್ವನ ಗ್ಯಾನಾದೆ ನಂಗೆ

ಬೊಚ್ಚುಬಾಯಿ ಗುಳಿಕೆನ್ನೆ ಹೊನ್ನುಕೂದ್ಲು ತಲೆತುಂಬ
ಮಾಸ್ಲುಬಣ್ಣ ಮಗ್ಗಸೀರೆ ಸೊಂಟಲೊಂದು ಸಂಚಿಗಂಟು
ನೆರ್ಗೆ ಮೂಡ್ದ ಹಣೆಲೊಂದು ಕೆಂಪುಬಟೋಟ್‌ನ ನನ್ನವ್ವ
ನಿನ್ನ ಗ್ಯಾನ ಹೆಚ್ಚಾವ್ತು ಮತ್ತೆ ಹುಟ್ಟಿ ಬಾ ಅವ್ವ...

**(ಅರೆಭಾಷೆ ಕವನ ಸ್ಪರ್ಧೆಲಿ ಮೂರನೆ ಬಹುಮಾನ ಪುರಸ್ಕೃತ)**

---

**ಕುಕ್ಕುನೂರು ರೇಷ್ಮ ಮನೋಜ್**
ಕುಶಾಲನಗರ






# ರಂಗಮಾಂತ್ರಿಕ ಜೀವನ್ ರಾಂ ಸುಳ್ಯ ಅವರೊಟ್ಟಿಗೆ ನಡ್ಸಿದ ಮಾತ್‌ಕತೆನ ಮುಂದುವರ್ದ ಭಾಗ:

**ವಿನೋದ್ ಮೂಡಗದ್ದೆ**

**ಪ್ರ: ಈಗ ಸುಳ್ಯಲಿ ರಂಗಭೂಮಿ ಚಟುವಟಿಕೆಗಳಿಗೆ ರಂಗಮನೆನೆ ಸ್ಪೂರ್ತಿತ ಹೇಳ್ರೆ ತಪ್ಪಾಕಿಲೆ, ಇದರ ಪ್ರಾರಂಭದ ಹಿನ್ನಲೆ ತಿಳ್ಸಿರೆನ ಸರ್?**

ಉ: ಹಿಂಗೆ ರಂಗಭೂಮಿಲಿ ತೊಡ್ಗಿಸಿಕಂಡ್ ಇರ್ಕನ ನನ್ನ ಅಪ್ಪಂಗೆ ಪಕ್ಷವಾತ ಆತ್. ಅವ್ ಮಲ್ಗಿದಲ್ಲಿಂದ ಏಳದಂತ ಪರಿಸ್ಥಿತಿ ಆಗಿತ್ತ್. ನಂಗೆ ಇತ್ತ ನಾಟಕಗಳಿಗೆ ಹೋಕು ಅದರೊಟ್ಟಿಗೆ ಅಪ್ಪನ ಆರೈಕೆಯ ಜವಬ್ದಾರಿ ಬೇರೆ. ಹಂಗೆನೆ ನಿರಂತರ ಆಗಿ ನಾಟಕ ಅಭ್ಯಾಸ ಮಾಡ್ಸಿಕೆ ಒಂದು ಖಾಸಗಿ ಜಾಗೆ ಬೇಕಿತ್ತ್.

ಯಾವುದೇ ಮಾಟಮಂತ್ರ, ಆಸ್ಪತ್ರೆ ಮೊದ್ದ್, ನಾಟಿ ಮೊದ್ದ್ ಅಪ್ಪನ ಖಾಯಿಲೆನ ಗುಣಮಾಡ್ಸಿಕೆ ಆತ್ಲೆ. ಇದೇ ಹೊತ್ತ್ಲಿ ನಾ ಗಮನಿಸಿದ ವಿಸಯ ಏನ್ ಹೇಳ್ರೆ ಯಾರಾರ್ ಅಪ್ಪನ ಹಳೇ ಜೋಸ್ತಿಗ ಬಾಕನ ಇವು ಬಾಳ ಹುರುಪ್ಲಿ ಎದ್ದ್ ಕುದ್ರಿಕೆ ನೋಡ್ದು. ಯಕ್ಷಗಾನದ ಫೋಟೊ ತೋರ್ಸ್ಕನಅವರ ಕಣ್ಣ್ಲಿ ಮೂಡ್ತಾ ಇದ್ದ ಆ ಒಂದ್ ಕಾಂತಿನ ನಾ ಗುರ್ತಿಸಿದೆ. ಅವ್ ಏನ್ ಕಳ್ಕಂಡಿದ್ದನೊ ಅದರ ಅವರ ಕಾಲ್‌ಬುಡಲಿ ಸಿಕ್ಕುವಂಗೆ ಆಕುತೇಳುವ ನಿಟ್ಟ್ಲಿ ಈ ರಂಗಮನೆ ಸುರು ಆತ್.

ಇಲ್ಲಿ ಪ್ರತಿದಿನ ನಾಟಕ, ಯಕ್ಷಗಾನ ಹಿಂಗೆ ಒಂದಲ್ಲ ಒಂದ್ ಏನಾರ್ ಆಕಂಡೇ ಇತ್ತ್. ಅದರ ನೋಡಿ ನೋಡಿ ನನ್ನ ಅಪ್ಪ ಹುಸಾರ್ ಆದೊ. ಈಗ ಹಂಙಾ ಆರೋಗ್ಯಲಿ ಒಳೊ, ಅವರ ಕೆಲ್ಸ ಎಲ್ಲ ಅವೇ ಮಾಡಿಕಣ್ವ ಮಟ್ಟಕ್ಕೆ ಬಂದೊಳೊ. ಇದ್ಕೆಲ್ಲ ಕಾರಣ ಕಲೆ ಮೇಲೆ ಅವ್ಕೆ ಇದ್ದ ಪ್ರೀತಿ.

ಹಿಂಗೆ ಹುಟ್ಟಿಕಂಡ ರಂಗಮನೆ ಇಂದ್ ಇಡೀ ಕಲಾಜಗತ್ತ್ನ ಸೊತ್ತು ಆವ್ವು.

**ಪ್ರ: ಒಂದ್ ಎರಡ್ ನಾಟಕ ಮಾಡ್ರೂ ಈಗ ಸಿನಿಮಾ ಕ್ಷೇತ್ರಕ್ಕೆ ಮುಖ ಮಾಡುವೆ, ನೀವ್ ಯಾಕೆ ಅತ್ತ ಗಮನ ಕೊಟ್ಟತ್ಲೆ?**

ಉ: ಸಿನಿಮಾತೇಳ್ದು ಒಂದ್ ಹೊತ್ತ್ಲಿ ಮುಗ್ದ್ ಹೋಗುವಂತದ್. ಒಮ್ಮೆ ಶೂಟಿಂಗ್ ಆದರೆ ಮತ್ತೆ ಅದ್ ಎಂದೆದಿಗೂ ಅದೇ ತರ ಇದ್ದದೆ. ಬದಲಾದುಲೆ. ಆದರೆ ನಾಟಕ ಹಂಗೆ ಅಲ್ಲ ಅದ್ ಜೀವಂತ ಕಲೆ. ಇಂದ್ ಮಾಡ್ದಂಗೆ ನಾಳೆ ಮಾಡಿಕೆ ಆದುಲೆ. ಹೊಸ ಹೊಸ ಪ್ರಯೋಗಗ ಆಕಂಡ್ ಇದ್ದದೆ. ಸಿನಿಮಾಲಿ ಮೊಂಯಿಸ ದೊಡ್ಡದಾಗಿ ಕಂಡದೆ, ಟಿವಿಲಿ ಸಣ್ಣ ಕಂಡದೆ. ಮೊಂಯಿಸ ಮೊಂಯಿಸ ಆಗಿ ಕಾಂಬದು ನಾಟಕಲಿ ಮಾತ್ರ. ಹಂಗಾಗಿ ನಂಗೆ ಇದೇ ನೆಮ್ಮದಿ ಕೊಡುವಂತದ್.

**ಪ್ರ: ಕೆಲವ್ ಜನ ನೆನ್ಸುವೆ ನಾಟಕತ ಹೇಳ್ರೆ ಒಂದೆರಡ್ ಡೈಲಾಗ್ಗಳ ಕಲ್ತ್ ವೇದಿಕೆಲಿ ಬಂದ್ ಹೇಳಿಬುಟ್ಟರೆ ನಡ್ದದೆತ, ಅವ್ಕೆ ಏನ್ ಹೇಳ್ರೆ?**

ಉ: ನಾಟಕತ ಹೇಳ್ದು ಕೇವಲ ಡೈಲಾಗ್ ಕಲ್ತ್ ಬಂದ್ ಹೇಳ್ರೆ ಸಾಲ್ದ್. ನಾಟಕ ಹೇಳ್ರೆ ಅದ್ ಜೀವನದ ಪಾಟ. ನಮ್ಮ ಜೀವನಕ್ಕೆ ಬೇಕಾದ ಎಲ್ಲಾ ತರಹದ ಸುಬುದ್ಧಿಗಳ ಇದ್ ಕಲ್ಸಿದೆ. ಹಂಗೆ ನೋಡ್ರೆ ನಾವುಗ ಪ್ರತಿದಿನ ನಮ್ಮ ಜೀವನಲಿ ನಾಟಕ ಮಾಡಿಕಂಡೇ ಇದ್ದವೆ. ಕೂಸುನ ಆಡ್ಸ್ಕನ, ಅಪ್ಪ ಅಮ್ಮನೊಟ್ಟಿಗೆ. ಪರಿಚಯದವರೊಟ್ಟಿಗೆ ಒಂದ್ ತರಮಾತ್, ಅಪರಿಚಿತರೊಟ್ಟಿಗೆ ಒಂದ್ ತರಮಾತ್ಹಿಂಗೆ ಇದೆಲ್ಲ ನಾಟಕನೆ. ಆದರೆ ವೇದಿಕೆ ಮೇಲೆ ಒಂದ್ ಕಥಾಪ್ರಸಂಗನ ಇಸಿಕಂಡ್ ಮಾಡ್ಕನ ಅದನ ಅನುಭವನೇ ಬೇರೆ.

ನಾಟಕಕೆ ಬಂದ್ ಸೇದರ್ಂವ ಬರೀ ನಟನೆನ ಮಾತ್ರ ಕಲಿಯದುಲೆ. ಜೀವನದ ಪಾಠನ ಕಲ್ತದೆ. ಅಂವ ಅಲ್ಲಿ ಎಲ್ಲ ತರದ ಕೆಲ್ಸಗಳ ಕಲ್ತದೆ. ಹೊಂದಾಣಿಕೆ ಕಲ್ತದೆ. ಮಾತ್ ಕಲ್ತದೆ. ನಾಟಕಲಿ ಇದ್ದಂವ ಎಲ್ಲಿ ಕೂಡ ಹೋಗಿ ಬದ್ಕಕ್ ತೇಳ್ದರ ತೋರ್ಸಿ ಕೊಟ್ಟದೆ.

**ಪ್ರ: ಜೀವನಲಿ ರಂಗಭೂಮಿ ಎಷ್ಟ್ ಮುಖ್ಯ?**

ಉ: ನಿಜ ಹೇಳಕುತ ಹೇಳ್ರೆ ರಂಗಭೂಮಿ ಜೀವನದ ಒಂದ್ ಅವಿಭಾಜ್ಯ ಅಂಗ. ವಿಶೇಷವಾಗಿ ನಾವ್ ತರಬೇತಿ ಪಡ್ದ್ ರಂಗದ ಮೇಲೆ ಒಂದ್ ಕಥೆನ ಪ್ರೇಕಕ್ಷರ್ಗೆ ಪ್ರಸ್ತುತಪಡ್ಸಿರೆ ಮುಗ್ತನೆನ್ಸಿರೆ ಆಲೆ. ನಮ್ಮ ಪ್ರತಿನಿತ್ಯದ ಜೀವನಲಿ ನಾವ್ ನಟರ್ ಆಗಿ ಒಳೊ.

ನನ್ನ ಅಮ್ಮ ಒಂದ್ ಒಳ್ಳ ನಟಿ ಆದ್ದ್‌ಂದ ನಾನ್ ಇಂದ್ ಹಿಂಗೆ ಒಳೆ. ಮನೆಯ ಪರಿಸ್ಥಿತಿ ಹೆಂಗೇ ಇದ್ದರೂ ಅದರ ನಾವ್ಗೆ ತೋರ್ಸಿ ಕಣದೆ ಜಾಣ್ಮೆಯಿಂದ ನಿಭಾಯಿಸ್ತಾ ಇದ್ದೊ.

ಕೂಸು ಮೊರ್ಡ್ತಾ ಉಟ್ಟುತ ಹೇಳಿರೆ ನಾವ್ ‘ಏಯ್ ಮೊರ್ಡ್ ಬಡ ಸುಮ್ಮನೆ ಇರ್’ತ ಹೇಳಿರೆ ಅದ್ ಇನ್ನ್ ಹೆಚ್ಚ್ ಮೊರ್ಟದೆ. ನಾವ್ ಅದರೊಟ್ಟಿಗೆ ಮೊರ್ಟಂಗೆ, ನೆಗಾಡಿದಂಗೆ, ಆನೆನಂಗೆ, ಕೊತ್ತಿನಂಗೆ ಆಡಿ ತೋರ್ಸಿರೆ ಮೊರ್ಡುದು ನಿಲ್ಸಿ ನೆಗಾಡ್ದೆ.

ಶಾಲಾ ಕಾಲೇಜ್ಲಿ ಪಾಠ ಮಾಡೊಕುತ ಆದರೆ, ವಿಷಯಗಳ ಮಕ್ಕಳಿಗೆ ಮುಟ್ಟಿಸೊಕುತ ಆದರೆ ಒಬ್ಬ ಗುರು ಆ ಪಾಠದ ಪಾತ್ರಲಿ ಪರಕಾಯ ಪ್ರವೇಶ ಮಾಡ್ರೆ ಮಾತ್ರ ಅದ್ ಲಾಯ್ಕಲಿ ಅರ್ಥ ಆದೆ. ಸುಮ್ಮನೆ ಪುಸ್ತಕಲಿ ಇದ್ದದರ ಓದಿಕಂಡ್ ಹೋದರೆ ಆಲೆ. ಹಂಗೆನೆ ಕಡೇಬೆಂಚಿಲಿ ಕುದ್ದಂವಂಗೆ ಕೇಳಕುತ ಆದರೆ ಅವನ ಧ್ವನಿ ಸ ಲಾಯ್ಕ ಇರೊಕು.

ಕೆಲವ್ ಜನ ನೋಡಿಕೆ ಎಷ್ಟ್ ಪೊರ್ಲ್ ಇದ್ದರೂ ಅವು ಬಾಯಿ ಬುಟ್ಟರೆ ಹೋತ್. ‘ಳ’ಕಾರ ‘ಹ’ಕಾರ ದೋಷಗ ಎದ್ದ್ ಕಂಡಂದೆ.ಅಂತಹ ಎಷ್ಟೋ ದೋಷ ಇದ್ದವ್ ಇಂದ್ ಲಾಯ್ಕಲಿ ಮಾತ್ ಕಲ್ತೊಳೊ ತ ಹೇಳಿಕೆ ಹೆಮ್ಮೆ ಆದೆ.

**ಪ್ರ: ನಿಮ್ಮ ಇಷ್ಟ್ ವರ್ಷದ ರಂಗಭೂಮಿ ಸೇವೆಗೆ ಬಾಳಷ್ಟ್ ಬಿರಿದು ಸಮ್ಮಾನಗ ಸಿಕ್ಕುಟು ಅಲ?**

ಉ: ನಾವ್ ಮಾಡೋ ಕೆಲ್ಸನ ನಿಷ್ಟೆಂದ, ಶ್ರೆದ್ದೆಂದ ಮಾಡ್ರೆ ಸಾಕ್ ಅದ್ ಫಲ ಕೊಟ್ಟದೆ. ಆಮೇಲೆ ಬಿರುದು ಸಮ್ಮಾನಗ ಅದಾಗೇ ಸಿಕ್ಕಿದೆ. ನಾವ್ ಎಂದಿಗೂ ಬಿರುದು ಸಮ್ಮಾನಕ್ಕಾಗಿ ಕೆಲ್ಸನ ಮಾಡಿಕೆ ಬೊತ್ತ್.

**ಪ್ರ: ಅರೆಬಾಸೆ ಮತ್ತು ರಂಗಭೂಮಿ ಬಗ್ಗೆ ಏನ್ ಹೇಳ್ರೆ ಸರ್?**

ಉ: ಅರೆಬಾಸೆ ನಂಗೆ ಬಾಳ ಹತ್ರದ ಬಾಸೆ. ಸುಳ್ಯ ಪರಿಸರಲಿ ಅದ್ ಜಾತಿನ ಮೀರಿ ಬೆಳ್ದುಟು. ನನ್ನ ಸುತ್ತಮುತ್ತ ಇರವು ಜೋಸ್ತಿಗ ಎಲ್ಲ

ಅರೆಬಾಸೆನವೆ. ಹಂಗೆ ಆ ಬಾಸೆ ನಂಗೆ ಹೊಸತೇನೂ ಅನ್ನಿಸ್ತ್ಲೆ. ಈ ಬಾಸೆನ ಸೊಗಡ್ ವಿಶಿಷ್ಟ ಆಗಿಯುಟ್ಟು. ಬಾಳವರ್ಷಂದ ಸ ನಂಗೆ ಅರೆಬಾಸೆಲಿ ಒಂದ್ ನಾಟಕ ಮಾಟ್ಸಕು ತ ಮನ್ಸಿತ್ತ್ ಆದರೆ ಸರಿಯಾದ ಸಮೆ ಕೂಡಿ ಬಂದಿತ್ಲೆ.

ಅರೆಬಾಸೆ ಮಾತಾಡವು ಒಂದಷ್ಟ್ ಜನರೊಟ್ಟಿಗೆ ರಂಗಭೂಮಿ ಕೆಲ್ಸಗಳ ಮಾಡಿಯೊಳೆ ಆದರೆ ಸಂಪೂರ್ಣ ಆಗಿ ಅರೆಬಾಸೆಲೇ ನಾಟಕ ಮಾಡಿತ್ಲೆ. ಮಾಡಕು ತ ಮನ್ಸ್ ಇದ್ದರೂ ಮಾಡ್ಸವು ಆಗಲಿ ಅದ್ಕೆ ತಕ್ಕನಾದ ಕಥೆ ಆಗಲಿ ಇತ್ಲೆ. ಇತ್ತೀಚೆಗೆ ಲಕ್ಷ್ಮೀನಾರಾಯಣ್ ಅವ್ ಬಂದ್ ಅಕಾಡೆಮಿ ಕಡೆಂದ ನಾಟಕ ಮಾಡ್ಸಕು ತ ಒಳೊ. ನೀವ್ ನಿರ್ದೇಶನ ಮಾಡಕು ತ ಕೇಳ್ಕನ ಕುಸಿಂದನೇ ಒಪ್ಪಿಕಂಡೆ. ನನ್ನ ಸಾಂಕಿದ ಬಾಸೆಲಿ ಒಂದ್ ನಾಟಕ ಮಾಡ್ಸುದು ನಂಗೂ ಕುಸಿನ ವಿಚಾರನೇ. ಹಂಗೆ ಸಾಹೇಬ್ರು ಬಂದವೆ ನಾಟಕನ ತಕಂಡೊಳೆ. ಅದಕ್ಕೆ ಬೇಕಾದ ಎಲ್ಲ ತಯಾರಿನ ಮಾಡಿಕೊಣ್ ತೊಳೊ. ಪ್ರಾದೇಶಿಕ ಬಾಷೆಲಿ ನಾಟಕ ಮಾಡಿ ಜನರ ಮನಸ್ಸಿಗೆ ತಲುಪೊಕುಂತೆಳ್ದು ನನ್ನ ಆಸೆ ಆಗುಟ್ಟು.

ಇದ್ ಇಲ್ಲಿಗೆ ನಿಲ್ಲಿಕಾದ್ ಇನ್ನಷ್ಟ್ ಹೊಸ ಹೊಸ ಪ್ರಯೋಗಗ ಆಕು, ಬೇರೆ ಬೇರೆ ರೀತಿಯ ನಾಟಕಗ ಬಾಕು ಅದ್ ಜನರ ತಲ್ಪೊಕು. ಆಗ ಮಾತ್ರ ನಾಟಕದೊಟ್ಟಿಗೆ ಭಾಷೆನೂ ಬೆಳ್ದದೆ.

**ಪ್ರ: ಪ್ರಶ್ನೋತ್ತರದ ಕೊನೇಲಿ ಯುವಜನತೆಗೆ, ರಂಗಭೂಮಿ ಆಸಕ್ತರಿಗೆ ಏನ್ ಹೇಳಿಕೆ ಇಷ್ಟಪಟ್ಟರೆ?**

ಉ: ಎಲ್ಲವ್ಕೂ ಹೇಳ್ದು ಒಂದೇ ಮಾತ್. ಕೆಲ್ಸ ಮಾಡಿ ಮಾಡುವ ಕೆಲ್ಸದ ಮೇಲೆ ಪ್ರೀತಿ ಇಟ್ಟ್ಕಣಿ ಆಗ ಅದ್ ಎಂದಿಗೂ ನಿಮ್ಮ ಕೈಬುಡ್ದುಲೆ. ಕಷ್ಟಗ ಬಂದ್ಕಂಡೇ ಇದ್ದದೆ ಹಂಗೆ ಹೇಳಿಯಾಗ ಸ ಹಿಂದಕೆ ಹೋಕೆ ಬೊತ್ತ್ ಅದರ ಎದಿರ್ಸಿ ಮುಂದೆ ಹೋಕು. ಆಗ ನಮ್ಮ ಜೀವನ ಲಾಯ್ಕ ಆದೆ. ಯಶಸ್ ಸಿಕ್ಕಿದೆ. ಧನ್ಯವಾದಗ.

---

**ವಿನೋದ್ ಮೂಡಗದ್ದೆ**
ತಿತಿಮತಿ. ಮೊ–9535615759




# ಕೂಸುನ ತೊಟಿಗಿಲಿಗೆ ಹಾಕುದು



**ಬಾರಿಯಂಡ ಜೋಯಪ್ಪ**

ಕೂಸುನ ತೊಟಿಗಿಲಿಗೆ ಹಾಕುದು, ಕೂಸುನ ತೊಟ್ಲಿಗೆ ಹಾಕುದು, ಕೂಸಿಗೆ ಹೆಸ್ರ್ ಇಕುದು, ಕೂಸಿಗೆ ನಾಮಕರಣ ಮಾಡ್ದು, ಹೇಂಗೆ ಹೇಳಿರೂ ಒಂದೇ ಅರ್ಥ.

ಕೂಸು ಹುಟ್ಟಿದ ಹದ್ನಾರ್ ದಿನ ಕಳ್ದ ಮೇಲೆ ಅದ್ಕೆ ಅನ್ನ ಕೊಡುವ ಶಾಸ್ತ್ರ ಮಾಡಿ ಹೆಸ್ರ್ ಇಟ್ಟ್ ತೊಟಿಗಿಲ್‌ಲಿ ಮಲ್ಗುಸುದು ಕ್ರಮ.

ತೊಟಿಗಿಲಿಗೆ ಹಾಕುವ ದಿನ ಅಯ್ಯೆ ಮತ್ತಾ ಕೂಸುನ ಮೀಸಿವೆ. ತೊಟಿಗಿಲಿಗೆ ಧೂಪದ ಹೊಗೆ ಕೊಟ್ಟ್ ದೀಪದ ಗೂಡು ಕೆಳಗೆ ನೆಲ್ಲಕ್ಕಿ ಅಡಿಲಿ ಇಸಿವೆ ಕೂಸಿಗೆ ಹೊಸ ಸುಪ್ಪ ತೊಡ್ಸಿ ಚಾಮೆವ್ವನ ಕೈಲಿ ಕೂಸುನ ಕೊಟ್ಟಿದ್ದವೆ. ಚಾಮೆವ್ವ ಕೂಸುನ ಹಿಡ್ಕಂಡ್ ತೊಟಿಗಿಲ್ ಹತ್ರ ಕುದ್ದಿದ್ದದೆ. ಅನ್ನನ ಮೊಸ್ರೊಟ್ಟಿಗೆ ಅರ್ದ್ ಮಣ್ಣ್‌ನ ಚಟ್ಟೆಲಿಸಿಕಂಡಿದ್ದವೆ.

ಸುರೂಗೆ ಚಾಮೆವ್ವ ಕೂಸಿಗೆ ಅನ್ನ ಕೊಡ್‌ಕನ "ಹುಗ್ಗೆ ಉಂಡ್ ಹುಗ್ಗೆ ಬೇರ್‌ವುಂಡ್. ನೂರು ವರ್ಸ ಆರೋಗ್ಯಂದ ಬಾಳ್"ತ್ತೇಳಿ ಆಶೀರ್ವದಿಸಿದೆ. (ಕೆಲವ್ ಕಡೆ ಚಿನ್ನದ ಉಂಗುರನ ಲಾಯ್ಕ ತೊಳ್ದ್ ಅದರ್ಲಿ ಅನ್ನ ಕೊಡ್ದೂ ಉಟ್ಟು.) ಮತ್ತೆ ಅಲ್ಲಿಗೆ ಬಂದವೆಲ್ಲಾ ಅನ್ನ ಕೊಡುವ ಶಾಸ್ತ್ರ ಮಾಡಿವೆ.



(ಇಂದ್‌ನ ಸ್ಥಿತಿಲಿ ಬಂದ ಎಲ್ಲರ ಪರವಾಗಿ ಒಂದಿಬ್ಬರ್ ಮಾತ್ರ ಅನ್ನ ಕೊಡ್ದು ಒಳ್ಳದ್).

ನಕ್ಷತ್ರದ ರೀತಿ ಪಂಚಾಂಗ ನೋಡಿ ಕೂಸುನ ಹೆಸ್ರ್ ನಿಶ್ಚಯ ಮಾಡಿದ್ದವೆ. ಅನ್ನ ಕೊಟ್ಟಾದ ಮೇಲೆ ಕೂಸುನ ತೊಟಿಗಿಲ್‌ಲಿ ಮಲ್ಗಸಕನ ಅದರ ಹೆಸ್ರ್‌ನ ಕೆಮಿಹತ್ರ 'ಪಿಸಿ ಪಿಸಿ'ತ ಮೆಲ್ಲ ಹೇಳಿ ಮಲ್ಗಿಸಿವೆ. ಮತ್ತೆ ಜೋರಾಗಿ ಕೂಸುನ ಹೆಸ್ರ್‌ನ ಹೇಳಿವೆ.

ಕೆಲ ಕಡೆ ಗುಂಡುಕಲ್ಲ್‌ನ ಮೀಸಿ, ಚೆಂಡಿ ತೆಗ್ದ್, ಗಂಧದ ಬೊಟ್ಟು ಹಾಕಿ ಬೆಳಿ ಬಟ್ಟೆಂದ ಸುತ್ತಿ ಧೂಪದ ಹೊಗೆ ಕೊಟ್ಟ್ ತೊಟ್ಲ್‌ದ್ ಆಚೆಂದೊಮ್ಮೆ ಈಚೆಂದೊಮ್ಮೆ ಹಿಂಗೆ ಮೂರ್‌ದಪ ಕಲ್ಲ್‌ನ ದಾಟಿಸಿ ತೊಟ್ಟ್‌ಲಿ ಮಲ್ಗಿಸಿವೆ. ಒಚ್ಚಿಕಂಡ್ ಜೋಗುಳ ಹಾಡಿವೆ. ಮತ್ತೆ ಕಲ್ಲ್‌ನ ತೆಗ್‌ದ್ ಕೂಸುನ ಪೂರ್ವಕ್ಕೆ ತಲೆ ಮಾಡಿ ಮಲ್ಗಿಸಿವೆ. ಕೂಸಿಗೆ ಕಲ್ಲಾಯ್ಸ ಬರ್ಲಿತ ಹೇಳುವ ಸಂಕೇತ. ಹೆಣ್ಮಕ್ಕ ತೊಟಿಗಿಲ್‌ನ ಒಚ್ಚಿಕಂಡ್ ಜೋಗುಳ ಹಾಡಿವೆ.

ಬಂದವೆಲ್ಲಾ ಕೂಸಿಗೆ ಉಡುಗೊರೆ ಕೊಟ್ಟ್ ಉಂಡ್ ತಿಂದ್ ಕುಸಿಂದ ಹೋದವೆ.

---

**ಬಾರಿಯಂಡ ಜೋಯಪ್ಪ**
ಮದೆ. ಮೊ–9481770584

# ಕರ್ನಾಟಕ ಅರೆಭಾಷೆ ಮತ್ತು ಸಾಹಿತ್ಯ ಅಕಾಡೆಮಿ

## ಅಧ್ಯಕ್ಷರು ಮತ್ತು ಸದಸ್ಯರ ವಿಳಾಸ

**ಅಧ್ಯಕ್ಷರು**
**ಶ್ರೀ ಲಕ್ಷ್ಮೀ ನಾರಾಯಣ ಕಜೆಗದ್ದೆ**
ಕನಕಮಜಲು ಅಂಚೆ,
ಸುಳ್ಯ ತಾಲೂಕು, ದ.ಕ 574223
ಮೊ.ನಂ 9449082249,
kajegadde@gmail.com

**ಸದಸ್ಯರು**
**ಶ್ರೀಮತಿ ಜಾನಕಿ ಬೈತಡ್ಕ**
#21–16. ರೇಸ್‌ಕೋರ್ಸ್ ರಸ್ತೆ,
ಎಲ್‌ಐಸಿ ಹತ್ತಿರ, ಮಡಿಕೇರಿ, ಕೊಡಗು.
ಮೊ ನಂ 9008571899

**ಶ್ರೀಮತಿ ಸ್ಮಿತಾ ಅಮೃತರಾಜ್**
'ಹಸಿರು'
ಬಾಲೆಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು
ಮೊ ನಂ 9980402968

**ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ**
ಟಿ.ಜಾನ್ ಲೇಔಟ್,
ಶಕ್ತಿ ಕ್ವಾಟ್ರಸ್
ಮಡಿಕೇರಿ
ಮೊ.ನಂ 9900992360

**ಶ್ರೀ ಎ.ಪಿ. ಧನಂಜಯ ಅಗೋಳಿಕಜೆ**
2ನೇ ಮೊಣ್ಣಂಗೇರಿ ಗ್ರಾಮ
ಮದೆ ಅಂಚೆ,
ಮಡಿಕೇರಿ ತಾಲೂಕು
ಮೊ ನಂ 9449731238

**ಶ್ರೀ ಆನಂದ ದಂಬೆಕೋಡಿ**
ಮೇಘಸಂದ್ಯೆ ಎಸ್ಟೇಟ್,
ಕತ್ತಲೆಕಾಡು ಗ್ರಾಮ,
ಕಡಗದಾಳು ಅಂಚೆ
ಮಡಿಕೇರಿ ತಾಲೂಕು
ಮೊ.ನಂ. : 9448141502

**ಡಾ. ದಯಾನಂದ ಕೂಡಕಂಡಿ**
ಬಿನ್. ಚಂದ್ರಹಾಸ ಕೂಡಕಂಡಿ
ತಾವೂರು ಗ್ರಾಮ, ಭಾಗಮಂಡಲ
ಮಡಿಕೇರಿ ತಾಲೂಕು
ಮೊ. ನಂ. : 9449766772
dayanandakudakandi@gmail.com

**ಶ್ರೀ ಕುಸುಮಾಧರ ಎ.ಟಿ.**
ಬಿನ್. ತ್ಯಾಂಪಣ್ಣಗೌಡ
ಅಳಿಕೆ ಮಜಲು ಮನೆ
ಕಾಯರ್ತೋಡಿ, ಸುಳ್ಯ
ಮೊ. ನಂ. : 7090133686

**ಡಾ. ವಿಶ್ವನಾಥ ಬದಿಕಾನ**
ಬಿನ್. ಹೂವಪ್ಪಗೌಡ ಬದಿಕಾನ
ನಂ. 9–88/9,
ಪ್ಲಾಟ್ ನಂ.. 407(34)
ಧ್ರುವ ರೆಸಿಡೆನ್ಸಿ, ಎಕ್ಕೂರು,
ಕಂಕನಾಡಿ –575002,
ಮಂಗಳೂರು, ದಕ್ಷಿಣ ಕನ್ನಡ
ಮೊ. ನಂ. : 9449615474

**ಶ್ರೀ ಜಯಪ್ರಕಾಶ್ ಗೌಡ ಮೋಂಟಡ್ಕ**
ಕೌಸ್ತುಭ ನಿಲಯ, ಬಿಳಿಮಲೆ ಗ್ರಾಮ
ನೆಟ್ಟಣ ಅಂಚೆ, ಕಡಬ ತಾಲೂಕು
ದಕ್ಷಿಣ ಕನ್ನಡ–574 230
ಮೊ. ನಂ. : 9480293464

**ಶ್ರೀ ಪುರುಷೋತ್ತಮ ಕಿರ್ಲಾಯ**
ಬಿನ್. ದೇವಣ್ಣ ಗೌಡ ಕೆ.
ಕಿರ್ಲಾಯ ಮನೆ
ಅರಂತೋಡು ಗ್ರಾಮ ಮತ್ತು ಅಂಚೆ
ಸುಳ್ಯ ತಾಲೂಕು, ದಕ್ಷಿಣ ಕನ್ನಡ
ಮೊ. ನಂ. : 9449770439

**ಡಾ. ಪುರುಷೋತ್ತಮ ಕರಂಗಲ್ಲು**
'ಚಾಣಕ್ಯ'
ಸರಕಾರಿ ಪ್ರಥಮ ದರ್ಜೆ ಕಾಲೇಜು
ಮುಂಭಾಗ, ಗಾಂಧಿನಗರ,
ಕಾವೂರು,
ಮಂಗಳೂರು, ದ.ಕ–575015.
ಮೊಬೈಲ್ : 9448216070

**ಶ್ರೀ ಭರತೇಶ ಅಲಸಂಡೆಮಜಲು**
ಅಲಸಂಡೆಮಜಲು ಮನೆ
ಕೊಳ್ತಿಗೆ ಗ್ರಾಮ,
ಪುತ್ತೂರು ತಾಲೂಕು
ದಕ್ಷಿಣ ಕನ್ನಡ–574 212,
ಮೊ. ನಂ. : 9008027271

**ಶ್ರೀ ಕಿರಣ್ ಕುಂಬಳಚೇರಿ**
ಬಿನ್. ಕೇಶವ ಕೆ.ಎ. ಕುಂಬಳಚೇರಿ
ಮನೆಪೆರಾಜೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ
ಮೊ. ನಂ. : 9164069225

ರಿಜಿಸ್ಟ್ರಾರ್
**ಶ್ರೀ ಚಿನ್ನಸ್ವಾಮಿ**
ಪಸಯ್ಯನಪುರ ಗ್ರಾಮ,
ಕಲೀಗೌಡನಹಳ್ಳಿ,
ಗುಂಡ್ಲುಪೇಟೆ ತಾಲ್ಲೂಕು
ಚಾಮರಾಜನಗರ ಜಿಲ್ಲೆ
ಮೊ: 9945045327

ಅರ್ಥ ಸದಸ್ಯರು
**ಶ್ರೀಮತಿ ಕೆ.ಟಿ. ದರ್ಶನ**
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ, ಮಡಿಕೇರಿ
ಮೊ: 9483110593

# ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ– ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ ಚೆಂಬು
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವ ಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.
18 ಬದುಕು : ಎಂ.ಜಿ. ಕಾವೇರಮ್ಮ
19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20 ಕಾಡ್‌ನ ಮಕ್ಕ : ಕೆ.ಆರ್. ತೇಜಕುಮಾರ್
21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ
22 ನೆಗೆ ಬೇಕ್ ಕೇದಗೆ ಗೊನೆ ಹಾಂಗೆ : ಡಾ॥ ಕರುಣಾಕರ ನಿಡಂಜಿ
23 ತಬ್ಲಿ ಮಂಜ : ಪಿ.ಜಿ. ಅಂಬೆಕಲ್
24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು
25 ಅರೆಬಾಸೆ ವ್ಯಾಕರಣ : ಪ್ರೊ. ಕೆ. ಕುಶಾಲಪ್ಪ ಗೌಡ
26 ಅಪೂರ್ವ ಸಂಗಮ : ಕಟ್ರತನ ಲಲಿತಾ ಅಯ್ಯಣ್ಣ
27 ಪುಂಸ್ತ್ರೀ (ಅರೆಭಾಷೆಗೆ ತರ್ಜುಮೆ) : ಎಂ.ಜಿ. ಕಾವೇರಮ್ಮ
28 ಕಲ್ಯಾಣಸ್ವಾಮಿ (ಅರೆಭಾಷೆಗೆ ತರ್ಜುಮೆ) : ಸಂಗೀತ ರವಿರಾಜ್




# ಹಿಂಗಾರ



## ಅರೆಭಾಷೆ ತ್ರೈಮಾಸಿಕ ಪತ್ರಿಕೆ

**ಅರೆಬಾಸೆ ನಮ್ಮ ಬಾಸೆ ಬನ್ನಿ ಓದೊಮ ಬಾಸೆ ಬೆಳಸಮೋ**

**ನಿವ್ಮೊಟ್ಟಿಗೆ ಮೊಬೈಲ್ ಬ್ಯಾಂಕಿಗ್ ಉಟ್ಟಾ?**
ಹಂಗಾರೆ ಅದರ್‌ಂದ ಹಿಂಗಾರ ಪತ್ರಿಕೆನ
ಮನೆಗೆ ತರಿಸಿಕೊಂಬೊಕೆ ಆದೆ.
ಇದ್ ನಿಮ್ಮ ಅನುಕೂಲಕ್ಕೆ ನಾವ್
ತಂದ ಹೊಸ ವ್ಯವಸ್ತೆ.

ದುಡ್ಡ್ ಕಟ್ಟಿ ಆದ ಮೇಲೆ ನಿಮ್ಮ ಮೊಬೈಲಿಗೆ
ಬ್ಯಾಂಕಿಂದ ಯುಟಿಆರ್ ನಂಬರ್ ಬಂದದೆ.
ಈ ಮೆಸೇಜ್ ನೊಟ್ಟಿಗೆ
- ನಿಮ್ಮ ಅಂಚೆ ವಿಳಾಸ
- ದುಡ್ಡ್ ಕಟ್ಟಿದ ದಿನ, ಹೊತ್ತ್
- ಎಸ್ಟ್ ದುಡ್ಡ್ ಕಟ್ಟಿದರಿಂತ

ಎಲ್ಲ ವಿವರನ ಅರೆಭಾಷೆ ಸಂಸ್ಕೃತಿ ಮತ್ತು
ಸಾಹಿತ್ಯ ಆಕಾಡೆಮಿನ ವಾಟ್ಸ್ಯಾಪ್
ನಂಬ್ರ 6362 522 677 ಕಳ್ಸಿಕೊಡಿ.

- ಕತೆ/ಪದ್ಯ/ಚುಟುಕು/ಲೇಕನಗಳ ಹಿಂಗಾರಲಿ ಬರೆಯಕ್
- ಬರವಣಿಗೆ ಮಾತ್ರ ನಾಲ್ಕ್ ಪುಟಕೆ ಸೀಮಿತ ಇರೊಕು.
- ಪುಟದ ಒಂದು ಬದಿಲಿ ಮಾತ್ರ ಸ್ಪಷ್ಟ ಬರ್ದಿರಕು.
- ನಿಮ್ಮ ಲೇಕನನ ಇ-ಮೈಲ್ ಮೂಲಕ ಕಳ್ಸಿ.
- ಹೆಸರ್/ ವಿಳಾಸ / ದೂರವಾಣಿ ಅಂಕಿಗ ಬರ್ದಿರಕು.



ಈ ಅರೆಬಾಸೆ ಪತ್ರಿಕೆ ನಿಮ್ಮ
ಮನೆಲೂ ಇರಲಿ

**ಮೂರ್ ವರ್ಸಕ್ಕೆ ರೂ. 200–00** | **ಅಜೀವ ರೂ. 600–00**

ನೆಂಪಿರ್ಲಿ, ಮೇಲೆ ಹೇಳಿರ್ವ ವಿವರಗಳ ನೀವ್ ಕೊಟ್ಟರೆ ಮಾತ್ರ ನಾವ್ಗೆ ಗೊತ್ತಾದೆ.
ಈ ವಿವರನ ಕೊಡದಿದ್ದರೆ ಹಿಂಗಾರನ ಕಳ್ಸಿಕೊಡಿಕೆ ಕಸ್ಟ ಆದೆ. ನಮ್ಮ ಅಕೌಂಟ್ ವಿವರ ಹಿಂಗೆ ಉಟ್ಟ್.

Account Holder Name: Registrar Karnataka Arebhashe Samskruthi & Sahitya Academy
Account Number : 64102780908
IFSC : SBIN0017853
Branch : Madikeri Town Branch.

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**
ಕಾಫಿಕೃಪಾ ಕಟ್ಟಡ, ರಾಜಸೀಟ್ ರಸ್ತೆ, ಮೊದಲನೆ ಮಹಡಿ, ಮಡಿಕೇರಿ
 arebaseacademy@gmail.com  08272-223055

**HINGARA** **Arebhashe Quaterly** Volume-4, Issue-3
Date : 30-09-2020 Kodagu KARARB/2016/69571 Price : 20/- Pages : 80



ಶಬ್ದಕೋಶ ಮಾಡುವ ಬಗ್ಗೆ ಸುಳ್ಯಲಿ ನಡ್ದ ಸಭೆ



ಅರೆಬಾಸಿಗರ ಪಂಡ್‌ನ ವಸ್ತುಗಳ ದಾಖಲೀಕರಣ ಸುರು ಮಾಡ್ದ್

Printed by **Chinnaswamy** on behalf of Registrar, **Karnataka Arebhase Samskruthi Mathu Sahitya Academy** and Published by **Chinnaswamy** on behalf of **Karnataka Arebhase Samskruthi Mathu Sahitya Academy** (name of owner) and Printed at **Aakrithi Prints,** Light House Hill Road, Mangaluru and Published at **Karnataka Arebhase Samskruthi Mathu Sahitya Academy,** Coffee Krupa Building, Ist Floor, Raja Seat Road, Madikeri, Kodagu District. Editor : **Dr. Dayananda Kudakandi**